# ರತ್ನಪಕ್ಷಿ

## ಜನಪದ ಕಥೆಗಳು

*ಸಂಪಾದನೆ*

**ಕೋಟಿಗಾನಹಳ್ಳಿ ರಾಮಯ್ಯ**

*ವಿನ್ಯಾಸ ಮತ್ತು ವರ್ಣಚಿತ್ರಗಳು*

**ಇಕ್ಬಾಲ್ ಅಹ್ಮದ್**

ಪ್ರಕಟಣೆ

ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ, ಡಿ.ಪಿ.ಇ.ಪಿ

ಬೆಂಗಳೂರು

*ಇವರ ಪರವಾಗಿ*



ಕನ್ನಡ ಪುಸ್ತಕ ಪ್ರಾಧಿಕಾರ

ಬೆಂಗಳೂರು - 560 018

RATNAPAKSI - *A Collection of Folk Stories of Old Mysore Region* - Edited by Kotiganahalli Ramaiah, Published by Kannada Book Authority, Pampamahakavi Road, Chamarajpet, Bangalore - 560 018 on behalf of District Primary Education Programme, Karnataka, Dr. Ambedkar Veedhi, Bangalore - 560 001

Pages : X + 86

ಮೊದಲ ಮುದ್ರಣ : 1998



ಚಿತ್ರಗಳು : ಇಕ್ಬಾಲ್ ಅಹ್ಮದ್

ಪ್ರತಿಗಳು : 24,000 (ಸಾಧಾರಣ)
1,000 (ಕ್ಯಾಲಿಕೊ)

ಬೆಲೆ : ರೂ. 40/- (ಸಾಧಾರಣ)
ರೂ. 70/- (ಕ್ಯಾಲಿಕೊ)

ಮುದ್ರಕರು
ಲಾವಣ್ಯ ಮುದ್ರಣ
ನಂ. 19, 15ನೇ ಕ್ರಾಸ್
ಬಿ.ಎಸ್.ಕೆ. 1ನೇ ಹಂತ
ಬೆಂಗಳೂರು - 560 050
ಫೋನ್ : 6610563

## ಶುಭ ನುಡಿ

'ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮಕ್ಕಾಗಿ ರೂಪಿಸಿರುವ 'ರತ್ನಪಕ್ಸಿ' (ಜನಪದ ಕಥೆಗಳ ಸಂಗ್ರಹ) 'ಬಾರೋ ಗೀಜಗ' (ಜನಪದ ಶಿಶುಪ್ರಾಸಗಳ ಸಂಗ್ರಹ) ಕೃತಿಗಳನ್ನು ಓದಿ ಸಂತೋಷಪಟ್ಟಿರುವೆ. ಮೊಟ್ಟಮೊದಲ ಬಾರಿಗೆ ಸಾವಿರಾರು ವರ್ಷಗಳ ಶ್ರೀಮಂತ ಪರಂಪರೆಯುಳ್ಳ ಜನಪದ ಸಂಪನ್ಮೂಲವನ್ನು ಪ್ರಾಥಮಿಕ ಶಾಲೆಯ ಮಕ್ಕಳ ಕಲಿಕೆಗೆ ಪೂರಕ ಸಾಮಗ್ರಿಯಾಗಿ ರೂಪಿಸುವ ಈ ಪ್ರಯತ್ನವೇ ಒಂದು ಹೊಸ ಪ್ರಯೋಗ. ಜಾನಪದ ಕ್ಷೇತ್ರದಲ್ಲಿ ಇದುವರೆಗೆ ವೈವಿಧ್ಯಮಯ ಪ್ರಯೋಗಗಳು ನಡೆದಿದ್ದರೂ ಈ ನಿರ್ದಿಷ್ಟ ದಿಕ್ಕಿನಲ್ಲಿ ನಡೆದಿರುವ ಕೆಲಸವಂತೂ ಕಡಿಮೆಯೇ ; ಹೇಳಬೇಕೆಂದರೆ ಗ್ರಾಮೀಣ ಮಕ್ಕಳು ಶಾಲೆಗೆ ಬರುವ ಮುಂಚೆ ಅವರ ಕಲಿಕೆಯ ಮೂಲವೇ ಅಜ್ಜ-ಅಜ್ಜಿಯರ ಜನಪದ ಕಥೆಗಳು ಹಾಗೂ ಜನಪದ ಶಿಶುಪ್ರಾಸಗಳು ಎಂದರೆ ತಪ್ಪಾಗಲಾರದು.

ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದ ಈ ವಿಪುಲ ಸಾಮಗ್ರಿ ಮಕ್ಕಳ ಕಲಿಕೆಗೆ ಪೂರಕವಾದಲ್ಲಿ ಶಿಕ್ಷಣವೆಂಬುದು ಅನ್ಯ ಪರಿಸರದಿಂದ ಹೇರಲ್ಪಟ್ಟಿದ್ದು ಎಂಬ ಭಾವನೆ ದೂರವಾಗಿ ಮಕ್ಕಳು ಸಹಜ ಪರಿಸರದೊಂದಿಗೆ ಅರಳುವಂತಾಗುವ ಸಾಧ್ಯತೆ ಇದೆ. ಹಾಗೆಯೇ ಶಿಕ್ಷಣ ಮತ್ತು ಕಲಿಕೆಯಿಂದ ದೂರವೇ ಉಳಿದಿರುವ ಜನಸಂಸ್ಕೃತಿಯ ಒಳನೋಟ ಮತ್ತು ವಿವೇಕವು ಪರಂಪರೆಯ ಪರಿಚಯದೊಂದಿಗೇ ಕಲಿಯುವ ಮಕ್ಕಳಿಗೆ ದಕ್ಕುವಂತಾಗಬಲ್ಲದು.

ಹಳೆ ಮೈಸೂರು ಪ್ರಾಂತ್ಯದ ಹಳ್ಳಿಯ ಅಜ್ಜ-ಅಜ್ಜಿಯರನ್ನು ಗುರುತಿಸಿ 'ಕಮ್ಮಟ'ಕ್ಕೆ ಬರಮಾಡಿಕೊಂಡು ಅವರಿಂದ ಈ ಸಾಮಗ್ರಿ ಸಂಗ್ರಹಿಸಿ ಕಾಸಿ, ಸೋಸಿ ಇದೀಗ ಈ ಸಂಕಲನಗಳ ರೂಪದಲ್ಲಿ ಮಕ್ಕಳಿಗೆ ನೀಡುತ್ತಿರುವುದರ ಹಿಂದೆ ಸಂಘಟಕರು ಪಟ್ಟಿರುವ ಶ್ರಮ ಶ್ಲಾಘನೀಯ. ಶಿಕ್ಷಕರು ಮಕ್ಕಳಿಗೆ ಈ ಪೂರಕ ಸಾಮಗ್ರಿಯನ್ನು ಕಲಿಕಾ ಸಾಧನವಾಗಿ ಬಳಸಿಕೊಳ್ಳುವಂತಾದರೆ ಮಾತ್ರ ಈ ಶ್ರಮ ಸಾರ್ಥಕ. ಇದನ್ನು ಸಾರ್ಥಕ ಪಡಿಸುವತ್ತ ಶಿಕ್ಷಕರೆಲ್ಲ ಮುಂದಾಗುತ್ತಾರೆಂಬ ವಿಶ್ವಾಸ ನನ್ನದು.

**ಹೆಚ್.ಜಿ. ಗೋವಿಂದೇಗೌಡ**
ಪ್ರಾಥಮಿಕ ಶಿಕ್ಷಣ ಸಚಿವರು
ಕರ್ನಾಟಕ ಸರ್ಕಾರ

# ಮುನ್ನುಡಿ

ಈ ಸಂಕಲನದಲ್ಲಿರುವ ಒಂದು ಅಪರೂಪದ ಕತೆ 'ರತ್ನಪಕ್ಸಿ'. ಗೊಬ್ಬರದ ರಾಶಿಯೊಳಗಿನ ರತ್ನಗಳನ್ನು ಈ ಕತೆ ಮಾಂತ್ರಿಕ ವಾಸ್ತವದೊಡನೆ ನಮ್ಮೆದುರಿಗೆ ತೆರೆಯುತ್ತದೆ. ಸಗಣಿ ಗೊಬ್ಬರದ ರಾಶಿಗಳಲ್ಲಿ ಹುದುಗಿರುವ ಇಂಥ ರತ್ನಗಳನ್ನು ಹೆಕ್ಕಿಕೊಡುವ ನಮ್ರ ಪ್ರಯತ್ನವಾಗಿ ಈ ಸಂಕಲನವನ್ನು ಸಿದ್ಧಪಡಿಸಿದೆ. ಈ ಪ್ರಯತ್ನ 'ಕಥೆ ಕಥೆ ಕಾರುಂಡ, ದೀಪ್ ದೀಪ್ ನಂಜುಂಡ' ಎಂಬ ಎರಡು ಹಂತದ 'ಕಥನ ಕಮ್ಮಟ'ಕ್ಕೆ ತೊಡಗಿಸಿತು. ಈ ಕಮ್ಮಟಕ್ಕೆ ಹಳೆ ಮೈಸೂರು ಪ್ರಾಂತ್ಯದ ಹಲವು ಭಾಗಗಳಿಂದ ದುಂಡಯ್ಯ. ಕ್ಯಾಣೆ ಚಿಕ್ಕಮ್ಮ, ನರಸೇಗೌಡ, ಸಾಸಲಮ್ಮ, ಕೆಂಚಮ್ಮ, ಮುನೆಮ್ಮ, ಕೆಂಪೇಗೌಡ, ವೆಂಕಟ್ರಮಣಪ್ಪ, ಈರಣ್ಣ, ಅರುಣಕುಮಾರ ಮುಂತಾದ ಕತೆಗಾರರು ಬಂದು ಭಾಗವಹಿಸಿ ಕತೆಗಳನ್ನು ಹೇಳಿದರು.

ಸಾವಿರಾರು ವರ್ಷಗಳ ಕಾಲ ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದ ಈ ಅಮೂಲ್ಯ ರತ್ನಗಳನ್ನು ಈ ಎಲ್ಲ ಕಥೆಗಾರರೂ ತಮ್ಮ ನೆನಪಿನ ಗಂಟುಗಳಲ್ಲಿ ಬಚ್ಚಿಟ್ಟು ಕಾಪಾಡಿ ತಂದು ಇಲ್ಲಿ ಬಿಚ್ಚಿಟ್ಟಿದ್ದಾರೆ. ಇಲ್ಲಿನ ಪ್ರತಿಯೊಂದು ಕಥೆಯೂ ಸಮುದಾಯ ಚಿಂತನೆ, ಸಮೂಹ ಸೃಷ್ಟಿಯ ಒಂದೊಂದು ರೂಪ, ಒಂದೊಂದು ಲೋಕ.

ಎಂದೂ ಕಾಣದ ದೂರ ಸೀಮೆಗೆ ಅಗಲಿ ಹೋಗುವಾಗ "ಮನೆ ಮುಂದೆ ಒಂದು ಮಲ್ಲಿಗೆ ಗಿಡವಾಕು..... ನಿತ್ಯ ನೀರುಯ್ಯಿ..... ಕಲಾ ಕಲ್ನೆ ಚಿಗುತ್ರೆ ನಾನು ಬದುಕಿದ್ದೀನಿ..... ಅಂದ್ಕೋ" ಎಂದು ಹೇಳಿ ಹೋಗುವುದು ಜನಪದರ ಪ್ರಬಲ ಪ್ರತೀತಿ. ಹೀಗೆ ನಿತ್ಯ ನೀರುಯ್ದು ಕಲಾಕಲ್ನೆ ಚಿಗುರಲಿ ಎಂದು ಸಾವಿರಾರು ವರ್ಷಗಳ ಈ ಜನಪದ ಕತೆಗಳ ಶ್ರೀಮಂತ ಪರಂಪರೆಯನ್ನು ನಮ್ಮ ಮನಸ್ಸಲ್ಲಿ ನೆಟ್ಟು ಹೋಗಿದ್ದಾರೆ. ಚಿಗುರಿಸಿ ಹೂವರಳಿಸಿಕೊಳ್ಳುವ ಅವಕಾಶ ನಮ್ಮದು.

ಅದಕ್ಕೆಂದೇ ಭಾಷೆಯ ಹಲವು ಪ್ರಾದೇಶಿಕ ಬಗೆಗಳು ಆಡುಮಾತಿನ ಲಯ, ಸೊಗಸು, ವಿಶಿಷ್ಟ ನುಡಿಕಟ್ಟುಗಳ ಅರ್ಥವಂತಿಕೆ ಮಕ್ಕಳ ಮನಸ್ಸಲ್ಲಿ ಚಿಗಿತು ಹೂವಾಗಬೇಕೆಂಬ ದೃಷ್ಟಿಯಿಂದ ಈ ಸಂಕಲನವನ್ನು ವಿನ್ಯಾಸಗೊಳಿಸಲಾಗಿದೆ. ಈ ಸಂಕಲನ ಪ್ರಾಥಮಿಕ ಶಾಲೆಯ ಕಲಿಯುವ ಮಕ್ಕಳಿಗೆಂದೇ ರೂಪಿಸಿದ್ದರೂ ಇದು ಕಲಿಸುವ ಶಿಕ್ಷಕರನ್ನೇ ಅವಲಂಬಿಸಿದೆ ಹಾಗೂ ಓದಿ ಮನನ ಮಾಡಿಕೊಳ್ಳುವುದಕ್ಕಿಂತ ಹೆಚ್ಚಾಗಿ ಗಟ್ಟಿಯಾಗಿ ಓದಿ ಕೇಳಿಸುವದಕ್ಕೆಂದೇ ವಿನ್ಯಾಸಗೊಳಿಸಲಾಗಿದೆ. ಆದ್ದರಿಂದ ತುಂಬಾ ಶ್ರಮವಹಿಸಿ ಸಂಗ್ರಹಿಸಿರುವ ಇಲ್ಲಿಯ ಪ್ರಾದೇಶಿಕ ಭಾಷಾ ಬಗೆಗಳು ಮಕ್ಕಳ ಕಿವಿಗೆ ಬೀಳುವಂತೆ ಮಾಡಲು ಶಿಕ್ಷಕರು ಈ ಸಂಕಲನದ ಕಥೆಗಳನ್ನು ತರಗತಿಯಲ್ಲಿ ಗಟ್ಟಿಯಾಗಿ ಓದಿ ಹೇಳಬೇಕೆಂದು ವಿನಂತಿಸಿಕೊಳ್ಳುತ್ತೇವೆ. ಈ ಸಂಕಲನದ ತಿರುಳು ಮಕ್ಕಳಿಗೆ ಮುಟ್ಟಲು ಇದು ಅವಶ್ಯ.

ಹಲವಾರು ಕೈಗಳು ಹಲವಾರು ತಿಂಗಳು ಕೂಡಿ ಶ್ರಮಿಸಿರುವ ಫಲ ಈ 'ರತ್ನಪಕ್ಷಿ'. ಇದಕ್ಕಾಗಿ ಆರಂಭದಿಂದಲೂ ಶ್ರಮಿಸುತ್ತಾ ಬಂದಿರುವ ರಾಮಕೃಷ್ಣ ಬೆಳತೂರು, ಸಿದ್ದರಾಜು, ಸರಸ್ವತಿ, ಸಿ. ಬಸವ ಲಿಂಗಯ್ಯ, ಪಿಚ್ಚಳ್ಳಿ ಶ್ರೀನಿವಾಸ್, ಹೊಸೂರು ಮುನಿಶ್ಯಾಮಪ್ಪ, ಲಕ್ಷ್ಮಣರಾಜು, ಆಲೂರು ದೊಡ್ಡಲಿಂಗಪ್ಪ, ಲಕ್ಷ್ಮೀಪತಿ ಕೋಲಾರ, ಕುಕ್ಕರಹಳ್ಳಿ ಬಸವರಾಜ, ಕೊಟ್ಟೂರು ಶ್ರೀನಿವಾಸ್, ಲಕ್ಷ್ಮಣರಾಜು, ಮಾಡ್ನಾಯಕನ ಹಳ್ಳಿ ರಂಗಪ್ಪ, ಹೊಸಳ್ಳಿ ರಾಮಕೃಷ್ಣ, ಗೋವಿಂದರಾಜು ;

ಹಾಗೂ ಈ ಸಂಕಲನ ಸೃಷ್ಟಿಗೆ ಕಾರಣರಾಗಿ ಯೋಜನೆಗೆ ಪ್ರೇರಣೆ ನೀಡಿದ ದೀಪ ಧನರಾಜ್, ನವರೋಜ್ ;

ಹಾಗೂ ತಮ್ಮ ಅಮೂಲ್ಯ ಸಲಹೆ ಸಹಕಾರಗಳೊಂದಿಗೆ ಜತೆಗೂಡಿ ದುಡಿದ ಲಿಂಗರಾಜು ಹಾಗೂ ಇಲ್ಲಿನ ಕಥೆಗಳಿಗೆ ತನ್ನ ಅನನ್ಯ ಶೈಲಿಯ ವರ್ಣಚಿತ್ರ ಬಿಡಿಸಿ ಈ ಕೃತಿಗೆ ಜೀವ ತುಂಬಿರುವ ಗೆಳೆಯ ಇಕ್ಬಾಲ್ ಅಹ್ಮದ್ ;

ಈ ಸಂಕಲನವನ್ನು ಕನ್ನಡ ಪುಸ್ತಕ ಪ್ರಾಧಿಕಾರದಿಂದ ಪ್ರಕಟಿಸಲು ತುಂಬು ಆಸಕ್ತಿವಹಿಸಿ ಸಾರ್ವಜನಿಕರಿಗೂ ಈ ಸಂಕಲನ ಲಭ್ಯವಾಗುವಂತೆ ಮಾಡಿದ ಶ್ರೀ ನೆಲಮನೆ ದೇವೇಗೌಡ ಅವರಿಗೆ ;

– ಈ ಎಲ್ಲರನ್ನು ತುಂಬು ಹೃದಯದಿಂದ ನೆನೆಯುತ್ತೇನೆ. ಇದಲ್ಲದೆ ಡಿ.ಪಿ.ಇ.ಪಿ. ಯೋಜನಾ ನಿರ್ದೇಶಕರಾದ ಶ್ರೀಮತಿ ಅನಿತಾ ಕೌಲ್, ಶಾರದಮ್ಮ ಮತ್ತವರ ಸಿಬ್ಬಂದಿಯ ನೆರವನ್ನು ಮನಸಾರೆ ನೆನೆಯುತ್ತೇನೆ.

**ಕೋಟಿಗಾನಹಳ್ಳಿ ರಾಮಯ್ಯ**
ಸಂಪಾದಕ

# ಅಧ್ಯಕ್ಷರ ನುಡಿ

ಮಕ್ಕಳ ಸಾಹಿತ್ಯದಲ್ಲಿ ರಂಜನೆಯೂ ಅಗತ್ಯ ; ಬೋಧನೆಯೂ ಅವಶ್ಯ. ಮಕ್ಕಳು ಏನನ್ನು ಓದಬಹುದು ಎಂದು ಭಾವಿಸಿ ಸಾಹಿತ್ಯವನ್ನು ಸೃಷ್ಟಿಮಾಡುವುದರ ಬದಲು ಮಕ್ಕಳು ಏನನ್ನು ಓದಬಯಸುತ್ತಾರೆ ಎಂಬುದನ್ನು ಅರಿತು ಅವರಿಗಾಗಿ ಸಾಹಿತ್ಯದ ಕೃಷಿ ಆಗಬೇಕು. ವಿಜ್ಞಾನ, ತಂತ್ರಜ್ಞಾನ, ಇತಿಹಾಸ, ಭೂಗೋಳ, ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ಸಾಹಿತ್ಯ, ಕಲೆ, ಸಮೂಹ ಮಾಧ್ಯಮ, ಸಮಕಾಲೀನ ವಿಚಾರಗಳು ಇವೆಲ್ಲವುಗಳ ಬಗ್ಗೆ ಪ್ರಾಥಮಿಕ ಶಾಲಾ ಮಟ್ಟದ ಮಕ್ಕಳಿಗೆ ಆರಂಭಿಕ ಅರಿವನ್ನಾದರೂ ಮೂಡಿಸಿ ಜ್ಞಾನದ ಬಹು ಶಾಖೆಗಳಲ್ಲಿ ಅವರಿಗೆ ಆಸಕ್ತಿ, ಕುತೂಹಲಗಳನ್ನು ಅರಳಿಸಬೇಕಾದುದು ಮಕ್ಕಳ ಪುಸ್ತಕಗಳ ಆದ್ಯ ಕರ್ತವ್ಯವಾಗಿರಬೇಕು.

ಬಹು ಮಾಧ್ಯಮಗಳ ಸೆಳೆತಗಳಿಗೆ ಆಕರ್ಷಿತವಾಗಿರುವ ಮಕ್ಕಳಿಗೆ ಓದು ಮಾಧ್ಯಮದಲ್ಲಿ ಅಭಿರುಚಿ ಮೂಡಿಸಿ ಪುಸ್ತಕಗಳಲ್ಲಿ ಆಸಕ್ತಿಯನ್ನುಂಟುಮಾಡಿಸಲು ಅನುವು ಮಾಡಿಕೊಡುವ ಉದ್ದೇಶದಿಂದ ಕನ್ನಡ ಪುಸ್ತಕ ಪ್ರಾಧಿಕಾರ ಒಂದು ನೂರು ಮಕ್ಕಳ ಪುಸ್ತಕಗಳನ್ನು ಪ್ರಕಟಿಸುವ ಆಶಯ ಹೊಂದಿದೆ. ಈ ನಿಟ್ಟಿನಲ್ಲಿ ಪುಸ್ತಕ ಪ್ರಾಧಿಕಾರವು ಎಳೆಯರಿಗೆ ಸುಲಭ ಗ್ರಾಹ್ಯವಾಗಬಹುದಾದ ಸರಳ ಭಾಷೆಯಲ್ಲಿ ಅಂದವಾದ ಚಿತ್ರಗಳ ಸಮೇತ ಪುಸ್ತಕಗಳನ್ನು ಹೊರತರಲು ಆಸಕ್ತಿ ಹೊಂದಿದೆ. ಈ ದಿಸೆಯಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ ಮಕ್ಕಳಿಗಾಗಿ 'ಚಿಗುರು', 'ಸಂತಮ್ಮಣ್ಣ', 'ಕಥೆ ಕೇಳಿ ಕನ್ನಡ ಕಲಿ', 'ಪಾತಾಳದಲ್ಲಿ ಪಾಪಚ್ಚಿ' ಕೃತಿಗಳನ್ನು ಸಚಿತ್ರವಾಗಿ ಪ್ರಕಟಿಸಿದೆ. ಜಾನಪದ ಮೂಲದಿಂದಲೇ ಬಂದ ಗ್ರಿಂ ಸೋದರರ ಕಿನ್ನರ ಕಥೆಗಳನ್ನು ನಾಲ್ಕು ಸಂಪುಟಗಳಲ್ಲಿ ಅನುವಾದದೊಂದಿಗೆ ಪ್ರಕಟಿಸುತ್ತಿದೆ.

ಈ 'ಮಕ್ಕಳ ಪುಸ್ತಕ ಮಾಲೆ'ಯ ಅಪರೂಪದ ಕೃತಿಗಳಾಗಿ 'ರತ್ನಪಕ್ಸಿ' ಹಾಗೂ 'ಬಾರೋ ಗೀಜಗ' ಸಂಕಲನಗಳು ಪ್ರಕಟಗೊಳ್ಳುತ್ತಿವೆ. ಈ ಎರಡೂ ಕೃತಿಗಳು ಕನ್ನಡ ದೇಸಿ ಪರಂಪರೆಯಿಂದಲೇ ಮೂಡಿರುವಂಥವು. ಜನಪದ ಸಾಹಿತ್ಯವನ್ನು ಮಕ್ಕಳ ಶಿಕ್ಷಣಕ್ಕೆ ಪೂರಕವಾಗಿ ಅಳವಡಿಸಿಕೊಳ್ಳುವ ಯತ್ನ ಇದುವರೆಗೂ ನಡೆದಿಲ್ಲ. ಜನಪದ ಸಾಹಿತ್ಯವನ್ನು ಅಸ್ಪೃಶ್ಯ ಎಂಬಂತೆಯೇ ಅವಗಣಿಸಲಾಗುತ್ತಿದ್ದರೂ ಈ ಸಾಹಿತ್ಯವನ್ನೂ ಮಕ್ಕಳ ಕಲಿಕೆಗೆ ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮದಲ್ಲಿ ಅಳವಡಿಸಲು ಮುಂದಾಗಿರುವುದು ಒಂದು ಮಹತ್ವದ ಸೂಚನೆ ಎಂದೇ ನನ್ನ ಭಾವನೆ. ಜನಪದ ಕಥೆಗಳನ್ನು ಹೇಳುವ, ಕೇಳುವ ಅಭ್ಯಾಸ ಕಣ್ಮರೆಯಾಗುತ್ತಿರುವ ಸಂದರ್ಭದಲ್ಲಿ ಭಾಷೆಯ ಸೊಗಡಿನೊಂದಿಗೇ ಕಥೆಗಳನ್ನು ನಿರೂಪಿಸುವ ಕ್ರಮ ಆಡುನುಡಿಯೊಂದಿಗಿನ ಸಾಹಿತ್ಯಕ ಸಾವಯವ ಸಂಬಂಧವನ್ನು ಸೂಕ್ಷ್ಮವಾಗಿ ತೋರುವಂತಿದೆ. ಮಕ್ಕಳಿಗೆ ಭಾಷಾ ಕಲಿಕೆಗೆ ಅಗತ್ಯವಾದುವು ಶಿಶುಪ್ರಾಸಗಳು ; ಇವು ಯಾವುದೇ ಭಾಷೆಯಲ್ಲಿ ಮಕ್ಕಳಿಗೆ ಆಕರ್ಷಣೆಯನ್ನೂ, ಉತ್ಸುಕತೆಯನ್ನೂ ಮೂಡಿಸುವಂಥವು. ಇಲ್ಲಿನ ಶಿಶುಪ್ರಾಸಗಳು ಕನ್ನಡದ ನುಡಿಗಟ್ಟಿನ ಒಳಹೊಕ್ಕುಗಳನ್ನೆಲ್ಲ ಧ್ವನಿಸುವಂಥವು. ಇಂಥ ಅಪರೂಪದ ಸಂಕಲನಗಳನ್ನು ಸಿದ್ಧಪಡಿಸಲು ಕಾರಣರಾಗಿ, ಇವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮೂಲಕ ಪ್ರಕಟಿಸಲು ಒಪ್ಪಿದ ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮದ ನಿರ್ದೇಶಕರಾದ ಶ್ರೀಮತಿ ಅನಿತಾ ಕೌಲ್ ಅವರಿಗೆ ; ಈ ಸಂಕಲನಗಳನ್ನು ಅಪಾರ ಶ್ರಮದಿಂದ ಸಂಪಾದಿಸಿರುವ ಶ್ರೀ ಕೋಟಿಗಾನಹಳ್ಳಿ ರಾಮಯ್ಯ ಅವರಿಗೆ ; ಇಲ್ಲಿನ ಕಥೆ-ಶಿಶುಪ್ರಾಸಗಳಿಗೆ ತನ್ನ ಅದ್ಭುತ ಕಲ್ಪಕತೆಯಿಂದ ಚಿತ್ರಗಳನ್ನು ಬಿಡಿಸಿರುವ ಶ್ರೀ ಇಕ್ಬಾಲ್ ಅಹ್ಮದ್ ಅವರಿಗೆ ; ಈ ಸಂಕಲನದ ಪ್ರಕಟಣೆಗೆ ತಮ್ಮ ಅಮೂಲ್ಯ ಸಲಹೆ ನೀಡಿದ ಶಿಕ್ಷಣತಜ್ಞ ಶ್ರೀ ಎನ್. ಮಾಚಯ್ಯ ಅವರಿಗೆ ಹಾಗೂ ಅಂದವಾಗಿ ಮುದ್ರಿಸಿಕೊಟ್ಟಿರುವ ಲಾವಣ್ಯ ಮುದ್ರಣದವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

**ನೆಲಮನೆ ಕೆ. ದೇವೇಗೌಡ**
ಅಧ್ಯಕ್ಷರು
ಕನ್ನಡ ಪುಸ್ತಕ ಪ್ರಾಧಿಕಾರ

# ಪರಿವಿಡಿ

# ಬೆಕ್ಕು ಹುಲಿಗೆ ಪಾಠ ಕಲಿಸಿದ್ದು

ಒಂದ್ ಹುಲಿ ವಿದ್ಯೆ ಕಲಿಯೋಕ್ಕೋಸ್ಕರ ಬೆಕ್ಕಿನತ್ರ ಬಂತು. ಎಲ್ಲಾ ವಿದ್ಯೆ ಕಲತ್ಕಂತು. ಬೆಕ್ಕು, "ಎಲ್ಲಾ ವಿದ್ಯೆ ಕಲ್ಸಿದ್ದೀನಿ. ನೀನ್ಹೋಗಿ ಶಿಕಾರಿ ಮಾಡ್ಬಹುದು" ಅಂತು. 'ನೀನೇ ಮೊದ್ಲ ಬೇಟೆ' ಅಂತ್ಹೇಳಿ ಬೆಕ್ಕಿನ ಕುತ್ಗೆ ಹಿಡ್ಕಂಬುಡ್ತು ಹುಲಿ. "ಯಾಕೋ ಪಾಪಿ, ನನ್ ಹಿಡ್ಕಂಡೆ ಗುರೂನ!" ಅಂತು ಬೆಕ್ಕು. "ಮೊದಲ್ನೇ ಬ್ಯಾಟೆ ನೀನೇ, ನಿನ್ನೇ ತಿಂದು ನೋಡ್ತೀನಿ!" ಅಂತು ಹುಲಿ. "ಅಯ್ಯೋ, ವಿದ್ಯೋ ಮುಗ್ದೋಯ್ತು ಅಂತ ತಿಳ್ಕೊಂಡ್ಯಾ? ಹೆಂಗವ್ನೊ ನೋಡಾನ ಅಂತಂದ್ರೆ, ನನ್ನೆ ಹಿಡ್ಕಂಡು ಕೊಲ್ಲೋಕ್ಕೆ ನೋಡ್ತಿಯಾ ? ನೀನ್ ಕಲಿಯೋದ್ ಇನ್ನೂ ಮುಗ್ದಿಲ್ಲ. ಕಲಿಯೂದು ಇನ್ನೂ ಅರ್ಧ ಅದೆ" ಅಂತು ಬೆಕ್ಕು.

ಹಂಗಂತಾನೆ ಸರ್‍ರಂತ ಹುಲಿ ಬೆಕ್ಕನ್ನ ಬುಟ್ಬುಟ್ಟು "ಸುಮ್ನೆ ಕುಶಾಲಗ ಹಂಗ್ ಮಾಡ್ದೆ ! ಉಳಿದರ್ಧ ವಿದ್ಯ ಹೇಳ್ಕೊಡಿ" ಅಂತು. ಬೆಕ್ಕು ಚಕ್ಕಂತ ಮರಕ್ಕತ್ತುಬುಡ್ತು. ಮ್ಯಾಲಕ್ಕೋಗಿ ತುದೀಲಿ ಕುಂತ್ಕಂತು. ಮರ ಹತ್ತೊ ವಿದ್ಯೇನ ಹುಲಿಗೆ ಇನ್ನೂ ಹೇಳ್ಕೊಟ್ಟಿರ್ಲಿಲ್ಲ. "ತಪ್ಪಾಯ್ತು ಗುರುಗಳೇ, ನನ್ಗೆ

ಮರ ಹತ್ತೊದ್ನ ಕಲ್ಸಿ, ನಿಮ್ಮ ದಮ್ಮಯ್ಯ" ಅಂತ ಕೆಳಗಿಂದಾನೆ ಹುಲಿ ಗೋಗರೀತು. ಅದ್ಕೆ ಬೆಕ್ಕು ಕೊಂಬೆ ತುದಿ ಮ್ಯಾಲಿಂದಾನೆ : "ಇಂತಾದ್ದು ಆಯ್ತದೆ ಅಂತಾನೆ ಕಲ್ಸಿರ್ಲಿಲ್ಲ ! ಹೋಗು, ಬ್ಯಾರೇ ಯಾರತ್ರನಾರೂ ಕಲ್ತು ಬಂದು ನನ್ನ ಹಿಡ್ಕಾ ನೋಡೋವಾ!" ಅಂತು.

ಹುಲಿ ನೋಡ್ತು ! ನೋಡ್ತು ! ನೋಡ್ತು ! ಬೆಕ್ಕು ಕೆಳ್ಗಡೆ ಬರ್ಲೇ ಇಲ್ಲ. ರೋಸೋಗಿ "ನಾಳೆ ನನ್ ಕೈಗೆ ಸಿಕ್ಕು, ಒಂದೇಟ್ಗೆ ಸಿಗ್ದು ತಿಂತೀನಿ!" ಅಂತು. "ನಾನು ಸಿಕ್ಕಿದ್ರೆ ತಾನೆ ನೀನ್ ಸಿಗಿಯೋದು!" ಅಂತು ಬೆಕ್ಕು. "ನೀನು ಸಿಗ್ದೆ ಇದ್ರೆ, ನಿನ್ ಹಿಸ್ಸೀನಾದ್ರೂ ಸಿಕ್ಕೋಲ್ವಾ? ಅದ್ನೇ ಸಿಗ್ದು ಬಿಡ್ತೀನಿ!" ಅಂತು ಹುಲಿ.

– ಅದ್ಕೆ ಬೆಕ್ಕು ಹಿಸ್ಸಿಮಾಡಿ ಅದ್ರ ಮೇಲೆ ಮಣ್ಣು ಮುಚ್ತದೆ. ಮುಚ್ಚಿ, ಮೂಸ್ನೋಡ್ತದೆ, ವಾಸ್ನೆ ಇರ್ಬಹುದೇನೋ ಅಂತ. ಇದ್ರೆ ಇನ್ನಷ್ಟು ಮಣ್ಣು ಮುಚ್ಚಿ ಬುಟ್ಟೋಯ್ತದೆ, ತನ್ನ ಹಿಸ್ಸೀನೂ ಗುರ್ತು ಸಿಗಬಾರದು ಅಂತ !...



# ಗೀಜಗನ ನ್ಯಾಯ

ಸಮುದ್ರ ದಂಡೇಲಿ ಒಂದು ದೊಡ್ಡ ಆಲದಮರ ಇತ್ತು. ಹಬ್ಕೊಂಡು ಹಬ್ಕೊಂಡು ಬೇಕಾದಷ್ಟು ಅಗಲ ಹರಡಿಕೊಂಡ್ತು. ಅಲ್ಲಿ ಸಾವಿರಾರು ಗೀಜಗ ಪಕ್ಸಿಗಳು ಗೂಡು ಕಟ್ಟಿಕೊಂಡಿದ್ವು. ಮರ ವಿಪರೀತವಾಗಿ ಹಣ್ಣು ಬಿಟ್ಟುಬಿಡ್ತು.

ಕೋತಿಗಳು ಹಣ್ಣು ತಿನ್ನೋಕೆ ಮರಹತ್ತಿ ಹೋದ್ವು. ಹಣ್ಣು ತಿಂದಾದ್ಮೇಲೆ ಕೋತಿಗಳು ಗೀಜಗನ ಹಕ್ಕಿಗಳ ಗೂಡ್ನೆಲ್ಲ ಕಿತ್ತುಕಿತ್ತು ಕೆಳಗೆ ಬಿಟ್ವು. ಮರಿ, ಮೊಟ್ಟೆ ಎಲ್ಲ ಹೋಗಿಬಿಟ್ವು. ಗೀಜಗನ ಪಕ್ಸಿಗಳು ಗೋಳಾಡಿಕಂಡು ಕಾಡೊಳಗಿದ್ದ ಪಸುಪಕ್ಷಿಗಳಿಗೆ ದೂರು ಕೊಟ್ವು. ಎಲ್ಲ ಪಸುಪಕ್ಸಿ ಸೇರಿ ನ್ಯಾಯ ಮಾಡಿ 'ಕೋತಿಗಳ್ದು ತಪ್ಪು' ಅಂದ್ವು.

ಆವಾಗ ಕೋತಿಗಳು, "ಏನು ನೀವು ನ್ಯಾಯ ಮಾಡೋದು? ನ್ಯಾಯ ಸರಿಯಿಲ್ಲ ! ನಮ್ಗೆ ಈರಂಗ್ ಕೊಡ್ಬೇಕು, ಎಂಟು ದಿವ್ಸ ಗಡುವು ಬೇಕು!" ಅಂದೊ.

ಸರಿ, ಗಡುವು ಕೊಟ್ವು ಪಸು ಪಕ್ಸಿ.

ಎಂಟು ದಿವಸಕ್ಕೆ ತಿರ್ಗ ನ್ಯಾಯಕ್ಕೆ ಸೇರ್ದ್ವೊ. ಸೇರ್ದ್ವಾಗ, ಒಂದು ಮಾಗಿರೋ ಹಲಸಿನಹಣ್ಣು ತಕ್ಕಬಂದು ನ್ಯಾಯಾಧಿಪತಿ ಕೂತ್ಕೊಳ್ಳೊ ಜಾಗದ ಹಿಂದೆ ಯಾರಗೂ ಕಾಣದಂಗೆ ಇಟ್ವು ಕೋತಿಗಳು.

ಎಲ್ಲಾ ಪಸುಪಕ್ಸಿ ಸೇರಿ ನರಿಗೆ ನ್ಯಾಯಾಧಿಪತಿ ಅಂತ ಮಾಡಿದ್ವು. ಎಲ್ಲ ಪ್ರಾಣಿಪಕ್ಸಿಗಳು ಈಗ್ಲೂ ಕೋತಿಗಳ್ದೆ ತಪ್ಪು ಅಂದ್ವು. ನರಿ ಕೂಡ, "ಕೋತಿಗಳು ಮಾಡಿರದು ತಪ್ಪು. ಗೀಜಗನ್ಹಕ್ಕಿ ಮಕ್ಕಳಮರಿನೆಲ್ಲ ತೀರಿಸಿ ಬಿಟ್ಟವೆ" ಅಂತು.

ಕೋತಿಗಳು "ನರಿರಾಜ ! ಏನು ನೀನು ಹೇಳೋ ಮಾತು ? ಅ್ಞಂ.... ಹಿಂದೆ ಮುಂದೆ ನೋಡಿ ಮಾತಾಡು" ಅಂದ್ವು. ಹಿಂದಕ್ಕೆ ತಿರ್ಗಿ ನೋಡಿದ್ರೆ ಹಣ್ಣು ಕಾಣಿಸ್ತು. ಆವಾಗ ನರಿ ಏನು ಮಾಡ್ತು ಅಂದ್ರೆ : "ಏಯ್ ಗೀಜಗನ ಹಕ್ಕಿಗಳೇ, ಹಣ್ಣು ಬಿಡೊ ಮರದಾಗೆ ನೀವು ಗೂಡು ಕಟ್ಟಿದ್ದು ತಪ್ಪು. ನೀವು ಎಲ್ಲೋದ್ರು ಮುಳ್ಳು ಮರದಲ್ಲಿ ಗೂಡು ಕಟ್ಬೇಕು. ಮುಳ್ಳಿನಮರ, ಗೊಬ್ಬಳಿಮರ ಇಂಥ ಮರಗಳಲ್ಲಿ ಗೂಡು ಕಟ್ಬೇಕೆ ಹೊರ್ತು, ಹಣ್ಣು ಬಿಡೊ ಮರದಲ್ಲಿ ಮಾತ್ರ ನೀವು ಕಟ್ಬಕೂಡ್ದು" ಅಂತ ತೀರ್ಮಾನ ಕೊಡ್ತು.

– ಅದ್ಕೆ ಗೀಜ್ಗನ ಹಕ್ಕಿಗಳು ಮುಳ್ಳು ಮರದಲ್ಲಿ ಮಾತ್ರವೇ ಗೂಡು ಕಟ್ಕೋದು.

# ಆನೆ ಬಾಲ ಹಿಡ್ದು ದೇವಲೋಕಕ್ಕೆ

ಒಂದೂರ್ನಲ್ಲಿ ಒಬ್ಬ ರೈತ. ಮಿಕ್ಕ ರೈತರ್ಗೆಲ್ಲ ನೂರಾರು ಎಕ್ರೆ ಜಮೀನಿದ್ರೆ, ಇವ್ನಿಗೆ ಮಾತ್ರ ಎರಡೇ ಎರ್ಡು ಗುಂಟೆ. ಇರೋ ಜಮೀನಲ್ಲೇ ಮುತುವರ್ಜಿಯಿಂದ ಕಬ್ಬು ಬೆಳ್ದ. ಎಲ್ಲಾರ್ಗಿಂತ ಇವನ್ದೆ ಚೆನ್ನಾದ ಬೆಳೆ. ಊರ್ನೋರೆಲ್ಲ ಇವ್ನ ಬೆಳೆ ನೋಡಿ ಮೂಗಿನ ಮ್ಯಾಲೆ ಬೆರಳಿಟ್ಕೊಂಡ್ರು.

ಆ ದೇವೇಂದ್ರನ ಪಟ್ಟಾನೇಗೂ ಇವ್ನ ಕಬ್ಬಿನ ಮ್ಯಾಲೆ ಆಸೆ ಆಗೋಯ್ತು. ದಿನಾ ರಾತ್ರಿ ದೇವಲೋಕ್ದಿಂದ ಇಳ್ದು ಬಂದು, ಇವ್ನ ಗದ್ದೆ ಕಬ್ಬು ಮೇಯೋದು.

ಈ ಬಡವ ಬಂದು ಗದ್ದೆ ನೋಡ್ದ. ಸಂಕಟ ಬಂತು. ರಾತ್ರಿ ಹೊತ್ತು ಕಾವಲ್ಗೆ ನಿಂತ.

ಸರ್ಯಾಗಿ ನಿಶ್‌ರಾತ್ರೀಲಿ, ಆ ಪಟ್ಟಾನೆ ಬಂದಿಳೀತು ಮೇಯಾಕೆ. ಅದ್ನೋಡ್ದಕೂಡ್ಲೆ ಇವನ್ಗೆ ರೋಸ ಬಂತು, ಆನೇನಾ ಅಟ್ಟಿಸ್ಕೊಂಡ್ಹೋದ, ಆನೆ ಹಾರೋಕ್ಕೆ ಸುರುಮಾಡ್ತು. ಆಗ ಈ ರೈತ ಅದರ ಬಾಲಾನ ಗಟ್ಯಾಗಿ ಇಡ್ಕೊಂಡುಬುಟ್ಟ ! ಆನೆ ಅವನ್ನೂ ದೇವಲೋಕಕ್ಕೆ ಹೊತ್ಕೊಂಡು ಹೋಯ್ತು.

ಆನೆ ರೈತನ ಸಮೇತ ದೇವೇಂದ್ರನ ಒಡ್ಡೋಲಗಕ್ಕೆ ಹೋಯ್ತು. ಅಲ್ಲಿ ಬಡರೈತನಿಗೆ ದೇವೇಂದ್ರನ ಮೋರೆ ನೋಡಿದ ತಕ್ಷಣ ಕ್ವಾಪ ಬಂತು. "ಯೋ ಏನಪ್ಪ ! ನಿನ್ನಾನೆಗೆ ಇಂತ ಬುದ್ಧಿ ಕಲ್ಸಿದ್ದೀಯಾ? ಬಡವ ನಾನು, ಇಸ್ಟಗಲ ಕಬ್ಬಾಕ್ಕಂಡಿದ್ರೆ ಅದ್ನೆಲ್ಲ ತುಳ್ಳು, ತಿಂದು ನಾಸ ಮಾಡೈತಲ್ಲ ನಿನ್ನ ಆನೆ!" ಅಂತ ಕನಾಮಾನವಾಗಿ ಬಯ್ದುಬುಟ್ಟ.

ದೇವೇಂದ್ರ ಕ್ವಾಪ ಮಾಡ್ಕಳ್ಳಿಲ್ಲ. 'ಪಾಪ ! ರೈತನ್ಗೆ ಎಸ್ಟು ಕಸ್ಟ ಇರ್ತದೋ ? ನೋವಿರ್ತದೋ?' ಅಂತ ಯೋಚ್ನೆ ಮಾಡಿ, "ಅಪ್ಪಾ ನೀನು ಬೆಳ್ಸಿರೋದ್ನೆಲ್ಲ ನನ್ನಾನೆ ಮೇಯ್ಕಂಡ್ರು ಚಿಂತಿಲ್ಲ, ತಗಾ!" ಅಂದೋನೆ ಅದೇ ಪಟ್ಟಾನೆಮ್ಯಾಲೆ ವಜ್ರ, ವೈಢೂರ್ಯ, ಸಕಲ ಸಂಪತ್ತೆಲ್ಲ ಏರಿ, "ಮನೇಗೆ ಬಿಟ್ಟು, ಬಾ ಹೋಗು!" ಅಂತ ಆನೇಗ ತಾಕೀತು ಮಾಡ್ದ.

ದೇವಲೋಕದಿಂದ ಬಂದ ಮ್ಯಾಲೆ, ಈ ಬಡರೈತ ದೊಡ್ಡಕುಳ ಆಗೋದ. 'ಅರರೆ! ಇರೋದು ಇಸ್ಟಗಲ ಕಬ್ಬಿನ ಗದ್ದೆ! ಅದ್ನುವೆ ಆನೆ ಮೇದು ಹಾಳಾಗೋಯ್ತು. ಅದೆಂಗೆ ಇವ್ನು ಸಾಪ್ಕಾರ ಆದ?' ಅಂತ ಸುತ್ತುಮುತ್ಲ ಜನ ಮಾತಾಡ್ಕಂಡ್ರು. ತಡೀಲಾರ್ದೆ ಕೊನೆಗೆ ಕೇಳೂ ಬುಟ್ರು, ಇವ್ನೂ ನಿಜ ಹೇಳ್ಬುಟ್ಟ.

'ಓಹೋ ! ಆ ಆನೆ ತಿರ್ಗ್ಾ ಬತ್ತದೆ ಮೇಯಾಕೆ!' ಅಂದ್ಬುಟ್ಟು ಊರೋರೆಲ್ಲ ಗದ್ದೆ ಕಾಯೋಕೋದ್ರು ರಾತ್ರೀಗೆ. ಮಾಮೂಲ್ನಂತೆ ನಿಶ್ರಾತ್ರಿಯಾಗ

ಆನೆ ಬಂತು. ಎಲ್ರೂ ಪಿಸ್ಗುಟ್ಟಿದ್ರು. "ಏ ಮಲ್ಲಣ್ಣ! ನೀನೇ ತಾನೇ ಮೊದ್ಲೋಗಿ ದ್ದೋನು. ಈವಾಗ್ಲೂ ನೀನೇ ಮೊದ್ಲೋಗಿ ಆನೆ ಬಾಲ ಹಿಡ್ಕೊ. ಆಮ್ಯಾಲೆ ನಿನ್ಕಾಲು ಇವ್ನು, ಇವ್ನ ಕಾಲು ಅವ್ನು, ಅವ್ನ ಕಾಲ್ನ ಇನ್ನೊಬ್ನು... ಇಂಗೆ ಹಿಡ್ಕಂಬುಟ್ಟು ಎಲ್ಲಾರೂ ಹೋಗ್ಬುಡಾನ ದೇವಲೋಕಕ್ಕ!" ಅಂದ್ರು.

ಸರಿ, ಮಲ್ಲಣ್ಣ ಹೋಗಿ ಆನೆ ಬಾಲ ಹಿಡ್ಕಂಡ. ಆನೆ ಹಾರ್ತು ! ಹಾರ್ತಲೆ, ಅವ್ನ ಕಾಲ್ನ ಇವನು ಹಿಡ್ಕಂಡ ! ಇವ್ನ ಕಾಲ್ನ ಇನ್ನೊಬ್ಬ, ಹಿಂಗೆ ಒಬ್ಬರ ಕಾಲ್ನ ಒಬ್ಬೊಬ್ಬರು ಹಿಡ್ಕೊಂಡ್ರು.

– ಹಿಂಗೆ ಗದ್ದೆ ಕಾಯೋಕೋದ ಜನರೆಲ್ಲ ಒಬ್ರಿಂದೊಬ್ರು ಹಿಡ್ಕಂಡವ್ರೆ ! ಆನೆ ಹಾರ್ತಲೇ ಅದೆ ! ಇನ್ನೇನು ದೇವಲೋಕ ಹತ್ರ ಬತ್ತಾ ಅದೆ !

ಆಗ ಕೋನೇಲಿದ್ದೋನೊಬ್ಬ ಆನೆ ಬಾಲ ಹಿಡ್ಕಂಡಿದ್ದ ಮಲ್ಲಣ್ಣನ್ನ ಕೇಳ್ದ, "ಏ ಮಲ್ಲಣ್ಣ ! ನೀನೋಗಿದ್ದಾಗ ಎಷ್ಟು ದಪ್ಪ ಗಂಟು ಕೊಟ್ಟು ಕಳ್ಸಿದ್ರು ?" ಅಂದ.

ಮಲ್ಲಣ್ಣ "ಈ.... ಷ್ಟ ದಪ್ಪ ಕಣಣ್ಣ!" ಅಂತ ಬಾಲ ಹಿಡಿದಿದ್ದ ಕೈ ಬುಟ್ಟು ! ಕೈ ಸನ್ನೇಲೆ ತೋರ್ದ...

ಆಮ್ಯಾಲೆ ಆನೆ ಅಲ್ಲೇ! ಇವ್ರು ದೊಪ್! ದೊಪ್! ದೊಪ್ ಇಲ್ಲೇ...

## ಚಟಪಟ ! ಗರಗರ ! ಕೊತಕೊತ !

ಒಬ್ಬ ದೊಡ್ಡ ಪಂಡಿತ ಹಾದೀಲೋಗ್ತಿದ್ದ. ಅವನ ಹಿಂದೂ ಮುಂದೂ ಆಳುಗಳಿದ್ರು. ಹಾದಿ ಬದೀಲೊಬ್ಬ ಕುರಿಕಾಯೋನು, "ಯಾವೂರು ಸೋಮೀ?" ಅಂತ ಕೇಳ್ದ. ಪಂಡಿತ ಮಾತಾಡ್ನಿಲ್ಲ. "ಯಾಕ್ ಸೋಮಿ ಕಿವಿ ಕೇಳ್ಸಾಕಿಲ್ವೆ!?" ಅಂದ ಕುರಿಕಾಯೋನು. ಆಗ್ಲೂ ಪಂಡಿತ ಮಾತಾಡ್ನಿಲ್ಲ, ಅವ್ನ ಆಳು ಮಾತಾಡ್ದ :

"ಏಯ್ ! ನಮ್ಮೆಜಮಾನ್ರ ಏನಂದ್ಕಂಡೀ ?........... ದೊಡ್ಡ ಪಂಡಿತ್ರು ! ಅವರ್ಗೆ ತಿಳೀದೇ ಇರೋ ಸಂಗ್ತೀನೇ ಇಲ್ಲ. ಅಂತೋರ್ನ ಮಾತಾಡ್ಸೋವಸ್ಟು ಸೊಕ್ಕೇನಯ್ಯ ನಿನ್ಗ ?!" ಅಂತ ಜಗಳ್ಕೆ ಬಿದ್ದು ಬಿಟ್ಟ.

"ಹಂಗಾರೆ ನಾನೊಂದು ಕೇಳ್ತೀನಿ, ಹೇಳ್ಲೀ ನಿಮ್ಮೆಜಮಾನ್ರು!" ಅಂದ ಕುರಿಕಾಯೋನು. ಆಗ ಪಂಡಿತ್ರು ಮಾತಾಡಿದ್ರು. "ಅದೇನು ಕೇಳ್ತಿಯೋ ಕೇಳಯ್ಯ, ಹೇಳ್ತೀನಿ!" ಅಂದ್ರು.

ಇಂವ

**ಚಟಪಟ !**

**ಗರಗರ !**

**ಕೊತಕೊತ !**

**ಸರಬರ !**

**ಕಟಕಟ !**

**ಕಾರಕಂ !**

**ಬಹುಕಾರಂ !**

– ಅಂದ್ರೆ ಏನ್ಹೇಳಿ?" ಅಂದ.

ಪಂಡಿತ ಯೋಚ್ನೆ ಮಾಡ್ದ, ತಲೆಕೆರ್‍ಕೊಂಡ, ಲೋಚಗುಟ್ದ, ಹುಡುಕ್ದ ! ಹುಡುಕ್ದ!...ಹುಡುಕ್ದ!... ಕೆಳ್ಗಿದ್ದ ಸೂರ್‍ಯ ನೆತ್ತಿಮ್ಯಾಲ್ ಬಂದ, ಇಳೀ ಹೊತ್ತುಗ ಬಂದ. ಊಹುಂ!... ಪಂಡಿತ ಹುಡುಕ್ತಾನೆ ಇದ್ದ!...

ಕುರಿಕಾಯೋನು ಆಗ "ಸಾಕು ಬುಡಿ ಸೋಮಿ, ಕತ್ಲಾಯ್ತದೆ. ಆಮ್ಯಾಲೆ ಹುಡ್ಕೋಕಿನ್ನೂ ಕಸ್ಟಾಯ್ತದೆ. ಹುಡುಕಿದ್ರೂ ಅಲ್ಲಿ ಸಿಗಾಕಿಲ್ಲ. ನಾನೇ ಹೇಳ್ತೀನಿ!" ಅಂತ ಹೇಳ್ದ.





**'ಚಟಪಟ!'** ಅಂದ್ರೆ

ಜ್ವಾಳ ತಗಂದು ಮೊರದಾಗೆ ಹಾಕ್ಕಂದು ಕೇರಬೇಕು!

**'ಗರಗರ!'** ಅಂದ್ರೆ

ಬೀಸೋಕಲ್ಲಾಗೆ ಹಾಕಿ ಅಂಬ್ಲಿ ನುಚ್ಚಿನಂಗೆ ಒಡಿಬೇಕು !

**'ಕೊತಕೊತ!'** ಅಂದ್ರೆ

ಅದನ್ನ ಒಲೆ ಮ್ಯಾಲಿಟ್ಟು ಅಂಬ್ಲಿ ಮಾಡ್ಬೇಕು !

**'ಸರಬರ!'** ಅಂದ್ರೆ

ಮಜ್ಜಿಗೆಗಾಗ್ಲೀ ಹಾಲ್ಗಾಗ್ಲೀ ಹಾಕ್ಯಂಡ್ ಸರಬರ ಅಂತ ಜುರ್ರಿಬೇಕು !

**'ಕಟಕಟ!'** ಅಂದ್ರೆ

ಚಪ್ಪೆ ಐತೆ ಅಂತ

ಈರುಳ್ಳಿ ಹಸಿಮೆಣಸಿನ್ಕಾಯ್

ಕಡಕಂತ ನೆಂಚಿಕಬೇಕು !

ಆವಾಗ ಹುಳಿಗರಮ ಎಂಥಾ ಚಂದಾಕ್ತತಿ!" ಅಂತ ಬಿಡ್ಸಿ ಹೇಳ್ದ. ಪಂಡಿತ ಅಲ್ಲಿ ಅರುಗಳ್ಗೇನೂ ನಿಲ್ದೆ ತಲೆ ಬಗ್ಗುಸ್ಕಂಡು ನಡ್ದ.

# ರತ್ನಪಕ್ಸಿ !

ಒಂದ್ ಪ್ಯಾಟೆ ಒಳ್ಗೆ ಒಬ್ಬ ಮನುಷ್ಯಾ ಇದ್ದ. ಅವ್ನ ಬೆಳಿಗ್ಗೆ ಏಳೋದು :

**"ಬುದ್ಯದೆ ದುಡ್ಡಿಲ್ಲ !**

**ದುಡ್ಡಿಲ್ಲ ಬುದ್ಯದೆ !**

**ಬುದ್ಯದೆ ದುಡ್ಡಿಲ್ಲ !"**

– ಅಂದ್ಕೊಂಡ್ ಬೀದಿ ಬೀದಿ ತಿರ್ಗೋನು. ಒಬ್ಬ ಸೇಠು ಎಸ್ಟೋ ದಿನ ಕೇಳ್ಕೊಂಡಿದ್ದ ಇವ್ನ ಮಾತ್ನ. ಒಂದಿನ ಕೇಳ್ದ :"ಎಸ್ಟು ಬೇಕಪ್ಪಾ ನಿನ್ಗ ದುಡ್ಡು?"

"ಹಾಂ ! ಕೊಡ್ತೀಯಾ?"

"ಕೊಡ್ತೀನಿ."

"ನಾನ್ ಕೇಳ್ದಾಗೆಲ್ಲಾ ಕೊಡ್ತೀಯಾ?"

"ಹುಂ, ಕೊಡ್ತೀನಿ."

"ಒಂದ್ ಎರ್ಡು ಸಾವ್ರ ಕೊಡು ಈವಾಗ."

ಸೇಠು ಕೊಟ್ಟ. ಇವ್ನ ದುಡ್ ಎತ್ಕಂಡು ಸಮುದ್ರ ದಡಕ್ಕೋದ.

ಒಂದ್ ಹಿಡಿ ಮಣ್ ತೆಗ್ದ, ನೋಡ್ದ, ಎಸ್ದ. ಇನ್ನೊಂದ್ ಹಿಡಿ ಮಣ್ ತೆಗ್ದ. ನೋಡ್ದ, ಎಸ್ದ, ಮೂರ್ನೆ ಹಿಡೀಗ ಹಕ್ಕಿ ಕಸ ಸಿಕ್ತು ! ನೋಡ್ದ. ನಗಾಡ್ದ !

ಅಲ್ಲಿ ಹೈಕ್ಳು ದನ, ಕುರಿ ಮೇಸ್ತಾ ಇದ್ರು, ಅವರ್ನ ಕರ್ದು ತಲಾ ನಾಲ್ಕು ನಾಲ್ಕಾಣೆ ಕೊಟ್ಟು, "ಇಲ್ಲಿ ಬಿದ್ದಿರೋ ಸಗ್ಣೀನೆಲ್ಲಾ ತಂದು ಒಂದ್ಕಡೆ ಗುಡ್ಡ್ಯಾಕ್ರೊ" ಅಂದ. ಹಾಕಿದ್ರು. ದಿನಾ ತಲಾ ನಾಲ್ಕ್ ನಾಲ್ಕಾಣೆ ಕೊಡೋದು, ಬಿದ್ದಿರೋ ಸಗ್ಣೀ ತರ್ಸಿ ಗುಡ್ಡೆ ಹಾಕ್ಸೋದು ; ಹಿಂಗೇ ಮಾಡ್ತಾ ಬಂದ.

ಎರ್ಡು ಸಾವ್ರ ತೀರ್ಹೋಯ್ತು. ತಿರ್ಗಾ ಸೇಠತ್ರ ಬಂದ. "ನಾಲ್ಕು ಸಾವ್ರ ಕೊಡ್ರಿ" ಅಂದ. ಕೊಟ್ಟ. ತಗಂಡು ತಿರ್ಗಾ ಹೋದ. ದನ ಮೇಸೋ ಹೈಕಳ್ಗೆ ತಲಾ ಎಂಟೆಂಟಾಣೆ ಕೊಟ್ಟ. "ದೂರ್ ದೂರಾ ಬಿದ್ದಿರೋ ಸಗ್ಣೀನೆಲ್ಲಾ ತಂದು ಗುಡ್ಡೇಗ್ಹಾಕ್ರೀ" ಅಂದ. ಹಾಕಿದ್ರು ! ಹಾಕಿದ್ರು ! ಹಾಕಿದ್ರು !! ಹಂಗ್ ತಂದು ಗುಡ್ಡೆ ಹಾಕ್ದ ಸಗಣಿರಾಸಿ ಒಂದ್ ಬೆಟ್ಟಾನೇ ನಿಂತಂಗಾಯ್ತು.

ಆ ಸಮುದ್ರ ದಡದಲ್ಲಿ ನಾನಾ ತರದ ಪಕ್ಸಿಗ್ಳು. ಅವ್ಕ ಕೂತ್ಕೊಣ್ಣಾಕ ಜಾಗ ಇಲ್ಲ, ಮಲಿಕ್ಕಣ್ಣಾಕ ಜಾಗ ಇಲ್ಲ ; ಮರಗಳೇ ಇಲ್ಲ. ಆ ಪಕ್ಸಿ ಎಲ್ಲಾ ಬಂದು ಬೆಟ್ಟ ಬಿದ್ದಂಗ ಬಿದ್ದೋಗಿತ್ತಲ್ಲ ಈ ಸಗ್ಣೀ ಗುಡ್ಡೆ ! ಅದರಾಗ ಗೂಡು ಮಾಡಿದ್ವು.

ಅವು ಈ ಸಮುದ್ರದಂಡ್ಯಾಗ, ಸಮುದ್ರ ಆಳ್ದಾಗ ಇರೋ ಮುತ್ತುರತ್ನ, ಮಾಣಿಕ್ಯ.... ಇದ್ನೆಲ್ಲ ಮೇದ್ಕಂಡು ಗೂಡಾಗ ಕಸಹಾಕ್ತಿದ್ವು. ಒಂದೈದಾರ್

ವರ್ಷ ಹಿಂಗೇ ಆಯ್ತು. ಪಕ್ಸಾದ ಪಕ್ಸೆಲ್ಲಾ ಬರೋವು, ಇರೋವು. ಮುತ್ತುರತ್ನ ಮೇಯ್ಕಂಬಂದು ಕಸ ಹಾಕೋವು.

ಒಂದಿನ ಎಲ್ಲಾ ಪಕ್ಸಿ ಮೇಯೋಕೆ ಹೋಗಿದ್ದಾಗ, ಇವ್ನು ಹಕ್ಕಿ ಗೂಡ್ನಾಗಿನ ಕಸಾನೆಲ್ಲಾ ಗಾಡಿಗಳಲ್ಲಿ ತುಂಬಿಸಿಕೊಂಡು ಬಂದ. ಆ ಕಸದಾಗೆ ಮುತ್ತು, ಮಾಣಿಕ್ಯ, ರತ್ನ ಎಲ್ಲಾ ಇದ್ವು.

"ರತ್ನ ಕೊಳ್ಳೋರೆಲ್ಲ ತಕ್ಸಣ್ಕ ಬನ್ನಿ ಅಂತ ಜಾಬು ಬರೀರಿ" ಅಂದ ಸೇಠ್ಗ. ಸೇಠು ಬರ್ದ. ಬಂದ್ರು. ಬ್ಯಾರೆ ಬ್ಯಾರೆ ದೇಶಗಳಿಂದಾನೂ ಬಂದ್ರು. ಇವ್ನು ಬಂದು ಬಕೀಟು ಕಸ ತಂದು "ಹತ್ಸಾವ್ರ ರೂಪಾಯಿ" ಅಂದ.

"ಇದೇನಪ್ಪ ಮಾಣಿಕ್ಯ ಮುತ್ತುರತ್ನ ಅಂದ್ಬುಟ್ಟು ಈ ಕಸಾನ ತಂದು ಮಡ್ಗಿದ್ದೀರಲ್ಲ!" ಅಂದ್ರು ಬಂದೋರು.

"ನೋಡ್ಸ್‌ಬೇಕಾ ನಿಮ್ಗೆ?!" ಇವ್ನು ಕೇಳ್ದ.

"ಹೌದ್, ನೋಡ್ಸ್‌ಬೇಕಪ್ಪಾ!" ಅಂದ್ರು ಅವ್ರು.

ಸರಿ. ಇವನೇನ್ ಮಾಡ್ದ ? ನೀರ್ ತಂದು ಬಕೀಟ್ಗ ಅಟ್ಟಿಸಿ ಕಲ್ಕಾಕಿಬುಟ್ಟ. ಅದ್ನೆಲ್ಲಾ ಬಗ್ಗಿಬುಟ್ಟ. ಅದರಲ್ಲಿದ್ದ ಕಸ ಎಲ್ಲಾ ನೀರಿನ ಜೊತೆ ಹೊರಟೋಯ್ತು. ಬಕೀಟ್‌ನಲ್ಲಿ ಏನು ಮುತ್ತು! ಮಾಣಿಕ್ಯ! ನವರತ್ನಗಳು!... ಫಳಫಳಾಯಿಸ್ತಾ ಅವೆ. ಅವ್ರೆಲ್ಲಾ ನಾನ್ ಮುಂದು ತಾನ್ ಮುಂದು ಅಂತ ಮ್ಯಾಲ್‌ಬಿದ್ದು ಕೊಂಡ್ಕೊಂಡೋದ್ರು.

ಆವಾಗ ಸೇಠು, "ರತ್ನಪಕ್ಸಿ" ಅನ್ನೋ ಬಿರುದ್ನ ಇವನ್ಗೆ ಕೊಟ್ನಂತೆ.

# ನೂರೊಂದ್ನೇ ಗಿಣಿ

ಮುತ್ತು–ರತ್ನ ತಿನ್ನೋ ಪಕ್ಷಿ ಸಮುದ್ರ ನಡಾ ಸೂಜಿಮ್ಯಾಲ್ ಕುತ್ಗಂಡು ತಪಸ್ಸು ಮಾಡ್ತಾ ಇತ್ತು. ಮಾಡ ಕವಚ್ಕಂಡು ಮಳೆ ಬರಂಗಾತು. 'ಬೆಚ್ಗಿರೋ ಜಾಗ ನೋಡ್ಬೇಕು' ಅಂತೇಳಿ ಅತ್ಲೂ ಇತ್ಲೂ ನೋಡ್ತು. ಕಾಗೆ ಕಂಡ್ತು. "ಏನಣ್ಣಾ, ಎಲ್ಲಾರ ಒಂದ್ ರಾತ್ರಿ ಕಳೆಯೋವಂತ ಜಾಗ ಬೇಕಲ್ಲ?" ಅಂತು.

"ನಾನ್ ಮುಂದ್ಲಿಂದ 'ಕಾರ್! ಕಾರ್!' ಅಂತ ಹೋಯ್ತೀನಿ. ನೀನ್ ಹಿಂದ್ಗಡೀಂದ ಬಾ !" ಅಂದಿದ್ದೆ ಕಾಗೆ ಹಾರ್ತು.

ಎರ್ಡೂ ಸೇರಿ ನೂರಾ ಒಂದ್ ಗಿಣೀ ಇರೋ ಜಾಗಕ್ಕ ಬಂದ್ವು. "ಏನ್ರಪ್ಪಾ, ಈ ಮಳೀಗೆ ಸಿಕ್ರೆ ಸತ್ತೋಗ್ತೀವಿ. ಬೆಳಕರಿತಂಕ ಜಾಗ ಕೊಟ್ ಕಾಪಾಡ್ರಿ" ಅಂತ ಕೇಳಕ್ಕೊಂಡ್ವು.

"ಮುತ್ತು–ರತ್ನ ತಿನ್ನೋ ಪಕ್ಷಿ ಅಪ್‌ರೂಪದ್ದು. ಅದ್ನ ಒಳಕ ಬಿಟ್ಕೋಂತೀವಿ. ಕಾಗೆ ಬ್ಯಾಡ" ಅಂದ್ವು ಎಲ್ಲಾ ಗಿಳಿ. ಆವಾಗ ಯಜ್ಮಾನ್

ಗಿಳಿ, "ಹೋಕ್ಕೊಳ್ಳಿ ಬಿಡ್ರೋ, ಆ ಜಗಲಿ ಮ್ಯಾಲ್ ಮಲಿಕ್ಕಳ್ಳಿ" ಅಂತು.

ಬೆಳಕರಿದ್ಮೇಲೆ ಗಿಳಿಗಳು ಬಂದ್ ನೋಡ್ತಾವೆ..... ಜಗಲಿ ತುಂಬ ಕಾಗೆರಾಜ ಕಸಹಾಕ್ಬುಟ್ಟವ್ನೆ! 'ಆಗಿದ್ದಾತು. ಅಚ್ಕಟ್ ಮಾಡಾನ' ಅಂತ ನೂರೊಂದ್ ಹಿಡಗ್ಲು ಮಾಡ್ಕೊಂಡು ಹೊಡೀತಾವೆ. ಕಾಗೆ ಆಲ್ಪಣ್ಣ ತಿಂದು ಉಚ್ಚಿತ್ತು ! ಏನು ಮಾಡಿದ್ರೂ ಆಲ್ದ ಬೀಜ ಹೋಗ್ಲಿಲ್ಲ.

ಮಳೆ ಬಂದು ಮಣ್ ಬಿದ್ದು, ಬೀಜ ಮೊಳ್ತು ಸಸಿ ಹುಟ್ಟಿ ದೊಡ್ಡೊಂದು ಆಲ್ದ ಮರಾ ಆತು. ಅದುಕ್ಕೆ ನೂರಾ ಒಂದು ಕೊಂಬೆ ಒಡೀತು. "ನೋಡ್ರೋ, ಕಾಗೆರಾಜ ಉಚ್ಚಿದ್ದ ಅಂತ ಅವತ್ತು ಬಯ್ತಿದ್ರೀ, ಈಗ ನಮ್ಗೆ ವೈನಾತು" ಅಂತು ಯಜ್ಮಾನ ಗಿಣೀ. "ಹೌದ್ಹೌದು!" ಅಂದ್ವು ಉಳ್ದ ಗಿಣಿ. ಒಂದೊಂದು ಹರೇಗೆ ಒಂದೊಂದ್ ಗಿಣಿ ಕುತ್ಕಂಡು ಆಸರ್ಕೆ ಬೇಸರ್ಕೆ ಕಳಿಲೀಕೆ ಕುಂತ್ವು.

ಹಿಂಗ್ ಇರ್ತಾ ಇರ್ತಾ ಈ ಮರ ಮತ್ತು ಗಿಳಿಗಳು ಒಬ್ಬ ಬ್ಯಾಡನ ಕಣ್ಣಿಗ ಬಿದ್ವು. ಬ್ಯಾಡನ್ಗೆ ಗಿಳಿಗಳ ಹಿಡ್ಯೋ ಆಸೆ ಹುಟ್ತು, 'ಅಲಲೆಲೆ! ನೂರೊಂದು ಗಿಳಿ ಅದಾವ ?! ನೂರ್ ಒಂದು ಉಳ್ಳು ಹಾಕಿದ್ರೆ ತಿನ್ನೋವಸ್ಟು ಮಾಂವ್ಸ ಸಿಗ್ತದಲ್ಲ!' ಅಂತ ಮನಸ್ನಾಗೇ ಅಂದಾಜು ಮಾಡ್ಕಂಡ. ಉಳ್ಳು ತಂದು ಹರೇಗೊಂದು ಉಳ್ನಂಗೆ ನೂರಾ ಒಂದು ಉಳ್ಳು ಕಟ್ದ, ಗಿಳಿ ಎಲ್ಲಾ ಉಳ್ನಾಗ ಬಿದ್ವೋ.



ಆಗ ಯಜಮಾನ ಗಿಳಿ, "ಅಯ್ಯಯ್ಯೋ ತಮ್ಮುಗಳ್ರಾ ! ನನ್ ತಪ್ಪಿಂದಾಗಿ ನಿಮ್ಗೆಲ್ಲಾರ್ಗೂ ಕುತ್ತು ಬಂದಂಗಾತು. ಒಂದ್ಮಾತು ಹೇಳ್ತೀನಿ, ಹೇಳ್ದಂಗೆ ಕೇಳ್ರಿ. ನೀವ್ಯಾರೂ ಕೊಸರಾಡಬ್ಯಾಡ್ರಿ ಅಲ್ಲಾಡಬ್ಯಾಡ್ರಿ! 'ಸತ್ತಂಗ್ ಕಣ್ಣು ಮುಚ್ಕೊಂಡು ನ್ಯಾತಾಡ್ತಾ ಇರೋವಾ!' ಅವ್ನು ಬಂದು 'ಸತ್ತವೆ!' ಅಂತ ತಿಳ್ಕಂಡು ಕಿತ್ಕಿತ್ತು ನೆಲಕ್ಕ ಒಗೀತಾನೆ. ನೆಲಕ್ಕ ಬಿದ್ರೂ ಮಿಸುಕಾಡ್ದಂಗೆ ಬಿದ್ದಿರನ ! ನೂರಾ ಒಂದ್ ಆಯ್ತು ಅನ್ನುತ್ಲೇ, ಎಲ್ಲಾ ಹಾರೋಗನ!" ಅಂತು.

ಎಲ್ಲಾ ಗಿಳೀ ಹಂಗೆ ಮಾಡುದ್ವು. ಬ್ಯಾಡ ಬಂದ. 'ಸತ್ತಿದ್ದಾವೆ' ಅಂತ ಅಂದ್ಕಂಡು ಕಿತ್ಕಿತ್ತು ನೆಲಕ್ಕ ಹಾಕ್ದ. ನೂರು ಆಗಿತ್ತು. 'ನೂರಾ ಒಂದು ಆದ್ವು!' ಅಂತ ಎಲ್ಲಾ ಅವಸ್ರದಿಂದ 'ಪುರ್ರ್!' ಅಂತ ಹಾರ್ಕೊಂಡೋದ್ವು. ನೂರ ಒಂದ್ನೇ ಆ ಯಜಮಾನ ಗಿಳಿ ಮಾತ್ರ ಸಿಗಾಕ್ಕಂತು......

# ಒನಕೆ ದಾಸಪ್ಪ

ಒಂದೂರ್ನಲ್ಲಿ ಗಂಡ ಹೆಂಡ್ತಿ ಇಬ್ರಿದ್ರು. ಏಕಾದಸಿ ಹಬ್ಬದ ದಿವ್ಸ ದೇವ್ರ ಪೂಜಿಸೋಕ್ಕೆ ದಾಸಪ್ಪ ಬೇಕಾಯ್ತು. "ಲೇ, ಪಕ್ದೂರ ದಾಸಪ್ಪನ್ನ ಬರ ಹೇಳ್ಬರ್ತಿನಿ. ನೀ ಅಡುಗೆ ಮಾಡು" ಅಂತ ಗಂಡ ಹೆಂಡ್ತಿಗೇಳ್ದ.

ಅವ್ಳು, "ನನ್ತಂದೆ ಮನೆ ದೇವ್ರು ಜೋಗಪ್ಪ, ಆ ಜೋಗಪ್ಪನ್ನೇ ಕರಸ್ಬೇಕು. ಈ ದಾಸಪ್ಪ ಬಿಲ್‌ಕುಲ್ ಬ್ಯಾಡ" ಅಂದ್ಲು. "ನೀ ಹೇಳ್ದಂಗೆಲ್ಲ ಮಾಡೂಕಾಗಲ್ಲ ; ನಾನು ಹೇಳ್ದಂಗ ಕೇಳ್ಬೇಕು. ದಾಸಪ್ಪನ್ಗೇ ಹೇಳಿ ಬರ್ತೀನಿ, ನಿನ್ ಕೆಲ್ಸ ನೀನು ನೋಡು" ಅಂದದ್ದೆ ದಡಾಬಡ್ನೆ ಕಡ್ದು ಹೊಂಟೋದ.

ದಾಸಪ್ಪ ಇರೋ ಊರ್ಗ ಬಂದು, "ದೇವ್ರು ಪೂಜಸ್ಬೇಕು. ನೀ ಬಂದ್ಬುಡು ದಾಸಪ್ಪ" ಅಂತ ಹೇಳಿ ಒಪ್ಸಿ ವಾಪಸ್ ಬಂದ್ಬುಟ್ಟ. ಬಂದು ಹೆಂಡ್ತಿಗೇಳ್ದ : "ದಾಸಪ್ಪ ಬರ್ತಾನೀಗ, ಕಾಲ್ಗ ನೀರ್ಕೊಟ್ಟು, ಪೂಜೆ ಮಾಡೊಕೆ ಎಲ್ಲಾ ತಯಾರಿ ಮಾಡು, ನಾನು ಹುಲ್ಲು ತಗಂಡು ಬಂದುಬಿಡ್ತೀನಿ" ಅಂದಿದ್ದೆ ಹುಲ್ಲು ಕೊಪ್ಲಿಗೋದ.

ಇತ್ತ ಹೆಂಡ್ತಿ ಒನಕೇಗೆ ಮೂರು ಸುಣ್ಣದ ಕಟ್ಟಿಕ್ಕಿ ಮನೆ ಮುಂದ್ನ ಬಾಗುಲ್ನ ನಿಲಾಕಿದ್ಲು. ಅದೇ ಹೊತ್ತಿಗೆ ಆ ದಾಸಪ್ಪಾನೂ ಬಂದೇಬಿಟ್ಟ. ಬಂದಿದ್ವೇ, "ಎಲ್ಲಮ್ಮಾ ನಿನ್ಗಂಡ, ಕಾಲ್ಗ ನೀರ್ಕೊಡು" ಅಂದ.

"ದಾಸಪ್ಪ ನೀರೇನೋ ಕೊಡ್ತೀನಿ ; ನೀನ್ಯಾವತ್ತೋ ಬಂದಿಪ್ಪ ವಾರ ತೀರ್ಸೋಕೆ ಬರ್ತೀನಿ, ಅಂದೋನು ಬರ್ಲೇ ಇಲ್ವಂತೆ. 'ಇವತ್ತು ಬರ್ಲಿ ಈ ಒನಕೇಲೇ ಹೊಡೀತೀನಿ!' ಅಂತ, ನೋಡಿಲ್ಲಿ ಒನ್ಕೇನ ನಿಲಾಕಿ ಮಡಗವ್ರೆ ನನ್ಗಂಡ!" ಅಂತ ಒನಕೆ ತೋರಿದ್ಲು.

'ಅಲೆಲೆ! ಅವತ್ತೇನೋ ಎಡವಟ್ಟಾಗಿ ಬರೋದ್ಕ ಆಗ್ದೆ ಹೋಯ್ತು. ಹಂಗಂತ ಇವತ್ತು ನಾನು ಈ ಒನ್ಕೇಲಿ ಏಟ್ ತಿನ್ಲಾ? ಈ ಸಾವಾಸ್ವೆ ಬ್ಯಾಡ!' ಅಂದಿದ್ವೇ, "ಹೋಯ್ತಿನಿ ಕನವ್ವಾ!" ಅಂತ ಹೊಂಟೋದ.

ಅವ್ನು ಅತ್ಲಾಗ ಹೋಯ್ತಿದ್ದಂಗೆ ಇತ್ಲಾಗಿಂದ ಗಂಡ ಹುಲ್ಲು ತಗಂಬಂದು, "ದಾಸಪ್ಪ ಬಂದ್ನಾ?" ಅಂತ ಕೇಳ್ದ. "ಬಂದಾ ಕನ್ರೀ, 'ಅರ್ಜೆಂಟ್ ಒನ್ಕೇಗೆ ಮೂರು ಸುಣ್ಣದ ಕಟ್ಟಿಕ್ಕಿ ಕೊಡು' ಅಂದ. ನಾನು ತರೋದ್ರೊಳ್ಗೆ ಕ್ವಾಪ ಮಾಡ್ಕೊಂಡು ಜಾಗ ಖಾಲಿ ಮಾಡಿಬುಟ್ಟುವ್ನೆ. ಇಲ್ಲೇ ಎಲ್ಲೋ ಹೋಯ್ತಾ ಇರ್ಬಹುದು. ಈ ಒನಕೆ ಕೊಟ್ಟು ಕರ್ಕಾ ಬನ್ನಿ" ಅಂತ್ಹೇಳಿ, ಹುಲ್ಲು ಹೊರೆ ಇಳಸ್ಕೊಂಡು ಗಂಡನ ಕೈಗ ಒನಕೆ ಕೊಟ್ಟು.







ನಿಜ್ವೇನೋ ಅಂದ್ಕೊಂಡು ಗಂಡ ಒನ್ಕೆ ಎತ್ಕೊಂಡು "ದಾಸಪ್ಪ, ದಾಸಪ್ಪ ನಿಂತ್ಕಾ ! ಕ್ಯಾಪ ಮಾಡ್ಕಂಡು ಯಾಕೋಯ್ತೀಯಾ? ತಗಾ ಒನಕೆಯಾ !" ಅಂತ ಒನಕೆ ತೋರುಸ್ತಾ ಇವ್ನು ಹಿಂದ ಓಡ್ದ.

ಒನಕೆ ಹಿಡ್ಕಂಡು ಹಿಂದೆ ಓಡ್ತಾ ಬರ್ತಾ ಇರೋ ಈವಯ್ಯನ್ನ ನೋಡುದ್ದೇ ಆ ದಾಸಯ್ಯ 'ಗಾಚಾರ ಬೆನ್ನತ್ಕಂಡು ಬಂದೇ ಬುಡ್ತಲ್ಲ!' ಅಂದಿದ್ದೇ ಹೆದ್ರಿ ದೌಡು ಹೊಡ್ದ.

'ಓಹೋ! ಎಲ್ಲೋ ಅರ್ಜೆಂಟ್ ಇರ್ಬೇಕು. ಅದ್ಕೆ ದಯ್ಯ ಹಿಂದೆ ಬಿದ್ದೋನಂಗೆ ಓಡ್ತಾ ಅವ್ನೆ. ನಾನೂ ಹಂಗೆ ಓಡುದ್ರೆ ಹೊತ್ತಿಗೆ ಸರಿಯಾಗಿ ಒನಕೆ ಕೊಡಬಹುದು' ಅಂತ ಇವ್ನೂ ಜೋರಾಗಿ ಹಿಂದೆ ಓಡ್ದ.

ಇವ್ನ ಕಂಡ ಅವ್ನು ಓಡ! ಅವ್ನ ಕಂಡ ಇವ್ನು ಓಡ !

ಹಿಂಗೇ ಓಡಿ ಓಡಿ ಸಾಕಾಗಿ ಗಂಡ ಹಿಂದಕ್ಕ ಬಂದ. "ಥೂ ಹಾಳು ಬಿದ್ದೋಗ್ಲಿ, ಈ ದಾಸಪ್ಪನ ಸವಾಸ್ವೆ ಬ್ಯಾಡ, ನೀನು ನಿಮ್ಮೂರ ಜೋಗಪ್ಪನ್ನೇ ಪೂಜಿಸ್ಕೋ" ಅಂದ.

– ಅಲ್ಲಿಂದಾಚ್ಗೆ ಜೋಗಪ್ಪನ್ನೇ ಪೂಜಿಸಿದ್ರಂತೆ.

## ತೆಂಗಿನ್ಕಾಯಿ ಬೇಕಾ!

ತೆಂಕಾಯಿಗ್ಳ ಹಬ್ಬ ಬಂತು. ಎಲ್ರೂ ತೆಂಗಿನ್ಕಾಯಗಳು ತಂದು, ಪೂಜೆ ಮಾಡ್ತಾ ಅವ್ರೆ. ಒಬ್ಬ ಸೆಟ್ಟೀ ನಾನೂ ಪೂಜೆ ಮಾಡ್ಬೇಕು ಅಂತ್ಹೇಳಿ ತೆಂಗಿನ್ಕಾಯಂಡ್ಗಿಗೋದ "ಎಂತ್ಯಪ್ಪಾ ತೆಂಗಿನ್ಕಾಯೀ?" ಅಂದ.

"ಐದ್ರೂಪಾಯಪ್ಪ" ಅಂದ ಅಂಗ್ಡ್ಯೋನು.

"ಅದಕ್ಕ ಕಡಿಮೆ ಇಲ್ವಾ?"

"ಇದರ್ಕ ಕಡಿಮೆ ಬೇಕಾಗಿದ್ರೆ ಕೇಜಾಪ್‌ನಾಗ ಕೊಡ್ತಾರೆ ಹೋಗು" ಅಂದ್ನು.

ಸೆಟ್ಟಿ ಕೇಜಾಪ್‌ಕ್ಕೋದ. "ಎಂತ್ಯಪ್ಪಾ ತೆಂಗಿನ್ಕಾಯಿ?" ಅಂದ.

"ನಾಲ್ಕು ರೂಪಾಯಿ."

"ಅದರ್ಕ ಕಡಿಮೆ ಇಲ್ವಾ?"

"ಇದರ್ಕ ಕಡಿಮೆ ಬೇಕಾದ್ರೆ ಬಂಗಾರ್‌ಪ್ಯಾಟ್ಕೋಗು!" ಅಂದ.

ಅಲ್ಯಕ್ಷಂದ. "ಎಂತ್ಯಪ್ಪಾ ತೆಂಗಿನ್ಕಾಯಿ?" ಅಂದ.

"ಮೂರ್ರೂಪಾಯಿ."

"ಅದರ್ಕ ಕಡಿಮೆ ಇಲ್ವಾ?"

"ಇದರ್ಕ ಕಡಿಮೆ ಬೇಕಾದ್ರೆ ಕೋಲಾರಕ್ಕೋಗು!" ಅಂದ.

ಸರಿ, ಕೋಲಾರಕ್ಕೂ ಬಂದ. "ಎಂತ್ಯಪ್ಪಾ ತೆಂಗಿನ್ಕಾಯಿ?" ಅಂದ.

"ಎರ್ಡು ರೂಪಾಯೀ."

"ಅದರ್ಕ ಕಡಿಮೆ ಇಲ್ವಾ?"

"ಅದರ್ಕ ಕಡಿಮೆ ಬೇಕಾದ್ರೆ ಬೆಂಗ್ಳೂರಕ್ಕೋಗು!" ಅಂದ.

ಬೆಂಗ್ಳೂರಕ್ಕೂ ಬಂದ. ಕೇಳ್ದ : "ಎಂತ್ಯಪ್ಪಾ ತೆಂಗಿನ್ಕಾಯಿ?"

"ಒಂದ್ ರೂಪಾಯಿ."

"ಅದರ್ಕ ಕಡಿಮೆ ಇಲ್ವಾ?"

"ಅದರ್ಕ ಕಡಿಮೆ ಬೇಕಾಗಿದ್ರೆ ಮಾಗ್ಡೀಕ ಹೋಗ್ಬುಡು" ಅಂದ.

ಸರೀ ; ಮಾಗ್ಡೀಕ ಹೋದ. ಕೇಳ್ದ : "ಎಂತ್ಯಪ್ಪಾ ತೆಂಗಿನಕಾಯಿ?"

"ಐವತ್ತು ಪೈಸನಪ್ಪಾ."

"ಅದರ್ಕ ಕಡಿಮೆ ಇಲ್ವಾ?"



"ಅದರ್ಕ ಕಡಿಮೆ ಬೇಕಾದ್ರೆ ಉಡುಪೀಗೋಗು, ಕೊಡ್ತಾರೆ" ಅಂದು ಉಡುಪೀಗ ಕಳುಸ್ದ.

ಸರಿ ! ಅಲ್ಯಕೂ ಬಂದು ಕೇಳ್ದ : "ಎಂತ್ಯಪ್ಪಾ, ತೆಂಗಿನ್ಕಾಯೀ?"

"ನಾಲ್ಕಾಣೆ."

"ಅದರ್ಕ ಕಡಿಮೆ ಇಲ್ವಾ?"

"ಅದರ್ಕ ಕಡಿಮೆ ಬೇಕಾದ್ರೆ ಊರ್ ಹಿಂದ್ಗಡೇಕೋಗು. ಅಲ್ಲಿ ಸುಮ್ನೇನೆ ಕೊಡೋ ಟೆಂಕಾಯಿಗಳವೆ!" ಅಂದ.

ಊರ ಹಿಂದ್ಗಡೇಕ ಬಂದ. ಹೊಳೆ ದಡ್ಡಾಗ ಹೊಳೆ ಒಳಕ್ಕ ಬಕ್ಯಂಡದೆ ತೆಂಗಿನ್ಮರ. ಆದ್ರೆ ಅದ್ನ ಎಕ್ಕಿ ಕಿಳ್ಬೊರಿಲ್ಲೇ ? ಸರಿ !

ಒಬ್ಬ ಒಂಟ್ಯೋನ್ಬಂದಾ. ಸೆಟ್ಟಿ ಅವನ್ನ ಕೇಳ್ದ : "ಆ ತೆಂಗಿನ್ಮರ ಅಂದಿಸ್ಕೊಟ್ರೆ ನಿನ್ಗೇನ್ನಾರೂ ಕೊಡ್ತೀನಿ, ಅಂದಿಸ್ಕೊಡು."

ಒಂಟ್ಯೋನು ಒಂಟೆ ತಂದು ಮರ್ದ ಕೆಳ್ಗೆ ನಿಲ್ಸಿ ಈ ಸೆಟ್ಟೀನ ಎತ್ತಿ ಹಿಡ್ಕೊಂಡು "ಅಂದಿಸ್ಕೊ" ಅಂದ. ಸೆಟ್ಟಿ ಆ ಟೆಂಕಾಯಿಪಟ್ಟೆ ಹಿಡ್ಡು ತಬ್ಕೊಂಡ. ಒಂಟೆ ಮುಂದಕ್ಕೋಗ್ಬುಡ್ತು. ಸೆಟ್ಟಿ ಕಾಲ್ನ ಒಂಟೆ ಸವಾರ ಹಿಡ್ಕಂಡ್ಬುಟ್ಟ. ಇಬ್ರೂನೂ ಯಾಲಾಡ್ತಾ ಅವ್ರೆ !

ಅಲ್ಲಿಗೊಬ್ಬ ಆನೆ ಮ್ಯಾಲೆ ಬಂದ. "ಏನಪ್ಪಾ ನಮ್ಮ ಇಳುಸ್ಕೊಂಡ್ಬುಡು, ನಿನಗ ಏನಾದ್ರೂ ಕೊಡ್ತೀವಿ" ಅಂದ್ರು ಇಬ್ರೂನು. ಅವ್ನು ಆನೆ ತಂದು ಮರದ ಕೆಳಗೆ ನಿಲ್ಸಿಸಿ ಅವ್ನ ಸವಾರ್ನ ಕಾಲ್ ಹಿಡ್ಕೊಂಡ ಇಳುಸೋಕ ಹಿಡುದ್ನೋ ಇಲ್ವೋ, ಈ ಆನೆ ಮುಂದೋಗಿಬುಡ್ತು! ಮೂವ್ವಾರೂ ಯಾಲಾಡ್ತಾ ಅವ್ರೆ !

ಸೆಟ್ಟಿ ಕಾಲು ಒಂಟೆ ಸವಾರ ಹಿಡ್ದವ್ನೆ. ಒಂಟೆ ಸವಾರ್ನ ಕಾಲ್ನ ಆನೆ ಸವಾರ ಹಿಡ್ದವ್ನೆ ; ಮೂರು ಜನಾನು ಯಾಲಾಡ್ತಾ ಅವ್ರೆ !

ಆವಾಗ ಈ ಹೊಳ್ಯಾಗ ಕೆಂಪ್ನೀರ್ ಬ್ಯಾರೇ ಬಂದ್ ಬುಡ್ತು. ಅದೇ ಹೊತ್ತಕ ಅಲ್ಯಕ್ಕೊಬ್ಬ ಕುದುರ್‍ಯೋನ್ಬಂದ. "ಅಪ್ಪಾ ಅಪ್ಪಾ ! ನಮ್ಮ ಇಳುಸ್ಕೊಂಡ್ಬುಡು, ನೀನ್ಗೇನಾರೂ ಕೊಡ್ತೀವಿ" ಅಂದ್ರು ಮುವ್ವರೂನು.

ಸರಿ, ಕುದುರ್‍ಯೋನು ಕುದ್ರೆ ತಂದು ಮರದ ಕೆಳಗೆ ನಿಲ್ಲಿಸಿ ಕೊನ್ಯಾಗ ಯಾಲಾಡ್ತಾ ಇದ್ನಲ್ಲ ಆನ್ಯೋನು, ಅವ್ನ ಕಾಲುಗಳ್ನ ಹಿಡ್ಕಂಡ, ಹಿಡ್ಕಂಡ್ನೋ ಇಲ್ಲೋ ಕುದ್ರೆ ಮುಂದ್ಕೋಗ್ಬುಡ್ತು ! ನಾಲ್ಕಾಳು ಯಾಲಾಡ್ತಾ ಇದ್ರು, ಒಬ್ರು ಕಾಲು ಒಬ್ರು ಹಿಡ್ಕಂಡು !

ಸೆಟ್ಟೀಗ ಶ್ಯಾನ ಹೊತ್ತು ಈ ಮೂರಾಳ್ ಬಾರ ಹೊತ್ಕೊಂಡು ಯಾಲಾಡೋಕ್ಕ ಆಗ್ದೆ ಹೋಯ್ತು, ಸೋತು ಕೈ ಬುಟ್ಟ ಬುಟ್ಟ. ನಾಲ್ಕಾಳೂ ನೀರಾಗ ಬಿದ್ದು ಆ ನೀರಾಗ ಹೋಗ್ಬುಟ್ರು.





# ಕುದ್ರೆನೊಣ ರಗುತ್ ಪರೀಕ್ಸೆ

ಪರಮೇಸ್ವರ ಒಂದ್ ಸಾರಿ ಏನ್ ಮಾಡದ್ನಂತೆ, ಈ ಕುದ್ರೆ ನೊಣ ಅಂತಿದೆಯಲ್ಲ, ದಪ್ಪದು, ಅದ್ನಾ ಕರ್ದು, "ಹೋಗಿ ಎಲ್ಲಾ ಪ್ರಾಣೇದು ರಗ್ತ ಪರೀಕ್ಸೆ ಮಾಡ್ಕಂಬಾ" ಅಂತ ಕಳ್ಸಿದ್ನಂತೆ. 'ಯಾವುದ್ರ ರಗುತ ರುಚಿ ಇರುತ್ತೋ, ಅದ್ನ ಮಾರಮ್ಮಂಗ ಬಲಿ ಕೊಡ್ಬೇಕು' ಅಂತ.

ಈ ಕುದ್ರೆನೊಣ ಹೋಗಿ ಎಲ್ಲಾದ್ರ ರಗ್ತಾನೂ ಪರೀಕ್ಸೆ ಮಾಡ್ಕಂದ್ ದಣ್ದು ಬಂತು. ಬಂದಿದ್ದೆ, ವಬ್ಬೆ ಮ್ಯಾಲೆ ಒಂದ್ ಎಂಟೇಗೊದ್ದ ಕೂತಿತ್ತು. ಇದು ಬಂದು ಸುದಾರ್ಸ್ಕೋಕೆ ಅದರ ಪಕ್ಕ ಕೂತ್ಕೋತು.

ಈ ಎಂಟೆಗೊದ್ದ ಕತ್ ಕುಣುಸ್ತಾ, "ಕುದ್ರೆನೊಣ, ಇದ್ಯಾಕ್ ಹಿಂಗ್ ನಗರ್ತಿದೀಯಲ್ಲ, ಎಲ್ಲೋಗಿದ್ದೆ?" ಅಂತ ಕೇಳ್ತು. ಕುದ್ರೆ ನೊಣ ಹೇಳ್ತು : "ಹಿಂಗೆ ಪರಮೇಸ್ವರ ರಗ್ತ ಪರೀಕ್ಸೆ ಮಾಡ್ಕಂಬಾ, ಎಲ್ಲಾ ಪ್ರಾಣೇದು, ಯಾವ ಪ್ರಾಣಿ ರಗುತ ರುಚಿಯಾಗಿರ್ತದೋ, ಅದ ಮಾರಮ್ಮಂಗೆ ಬಲಿ ಕೊಡ್ಬೇಕು ಅಂತ ಕಳುಸ್ದ. ಮಾಡ್ಕಂಬಂದಿ."

"ಅಲೆಲೆಲೆ ; ಹೈನಾತಿ ಕೆಲ್ಸಾನೇ ಮಾಡ್ಕಂದ್ ಬಂದಿದ್ದೀಯಾ ಬುಡು. ಅದ್ಸರಿ ಯಾವ್ಯಾವುದ್ರ ರಗ್ತ ರುಚಿ?" ಎಂಟೆಗೊದ್ದ ಕೇಳ್ತು.

"ಯಾವುದ್ರ ರಗ್ತುವೂ ರುಚಿ ಇಲ್ಲ. ಮನುಷ್ಯನ್ ರಗ್ತ ಒಂದೇ ರುಚಿ!" ಅಂತು ಕುದ್ರೆ ನೊಣ.

ಈ ಮಾತು ಕೇಳ್ತೋ ಇಲ್ಲೋ, ಈ ಎಂಟೆಗೊದ್ದಕ್ಕ ಚಿಂತೆ ಹತ್ಕತು. 'ಅಯ್ಯೋ ಪಾಪ, ಈ ಮನುಷ್ಯನ್ನ ವರ್ಸ ವರ್ಸ ಮಾರಮ್ಮಂಗೆ ಬಲಿ ಹೊಡೀತಾ ಹೋದ್ರೆ ಅವನ್ವಂಸ ಉಳ್ದಾತೇ, ನಿರ್ವಂಸ ಆಗೋದಿಲ್ವಾ ! ಏನಾರ ಮಾಡಿ ಉಳುಸ್ಬೇಕಲ್ಲ.... ಅಂತ ಯೋಚ್ನೆ ಮಾಡ್ತು. ಮಾಡಿ, "ಎಲ್ಲಾನೂ ನೋಡ್ದಿ ಅಂದ್ಯಲ್ಲ? ನನ್ ರಗುತಾನೂ ಸೊಲ್ಪ ಪರೀಕ್ಸೆ ಮಾಡ್ ಬಾ" ಅಂತು.

"ಹೇ, ನಿನ್ ಮೈ ತುರಿ ತುರಿ ಆಗೋದಿಲ್ಲ" ಅಂತು ಕುದ್ರೆನೊಣ.

ಎಂಟೆಗೊದ್ದ ಬುಡಬೇಕಲ್ಲ. "ಇಲ್ನೋಡು ! ಇಲ್ಲಿ ಮಿದುವಾಗದೆ ಈ ಕಟ್ಬಾಯಿ ತಾವ. ಬಾ, ಬಂದ್ ನೋಡ್ಬುಡು!" ಅಂತು ಕಟ್ಬಾಯ ಕಿಸ್ದು ತೋರ್ತು.

'ಸರಿ, ಎಲ್ಲಾ ಪ್ರಾಣೇದು ಆಯ್ತು. ಇದೊಂದ್ಯಾಕೆ ಬುಟ್

ಬುಡೋದು ? ಪರೀಕ್ಸೆ ಮಾಡೇಬುಡೋವ ' ಅಂದ್ಕೋತಾ ಬಂದು ಕೂತ್ಕಂತು. ಕಟ್ಟಾಯಿ ತಾವ ಕೂತ್ಕಂತೋ ಇಲ್ಲೋ.... ಎಂಟೆಗೊದ್ದ ನೊಣಕ್ಕಂತ ನಾಲುಗ ಚಾಚಿ ಗುಳುಕ್ ಅಂತ ತಿಂದ್ಕಂತು ಕುದ್ರೆನೊಣಾನ.

ಪಕವಲ್ಲಿ ಒಂದ್ ದನ ಮೇಯ್ತಾ ಇತ್ತು. ಅದ್ನ ಕರೀತು, "ಬಸ್ವಣ್ಣಾ, ಬಸ್ವಣ್ಣಾ ! ಬಾ ಹೋಗಾನ."

"ಎಲ್ಲುಗ ಎಂಟೆಗೊದ್ದ?"

"ಪರಮೇಸ್ವರ್ನತ್ರ ಹೋಗ್ಬೇಕು. ನೀ ಒಂದ್ ಸುಳ್ಳಸಾಕ್ಸ್ಯ ಹೇಳ್ಬೇಕು!"

"ಏನಂತ?"

ಆಗ ಎಂಟೆಗೊದ್ದು ಪರಮೇಸ್ವರ ಕುದ್ರೆನೊಣಾನ ರಗುತ ಪರೀಕ್ಸೆಗೆ ಕಳ್ಸಿದ್ನೆಲ್ಲಾ ಹೇಳಿ, 'ಮನುಷ್ಯನ ರಗ್ತ ರುಚಿ' ಅಂದದ್ದ ಕೇಳಿ, 'ಅವ್ನ ವಂಸ ನಿರ್ವಂಸ ಆಗ್ದೆ ಇರ್ಲಿ' ಅಂತ ತಾನೀಗ ಕುದ್ರೆನೊಣ ನುಂಗ್‌ಕೊಂಡದ್ದೂ ಹೇಳ್ತು. ಹೇಳಿ, "ಈಗ ನಾ ಆ ಪರಮೇಸ್ವರ್ನತ್ರ ಹೋಗಿ 'ಯಾವ ಪ್ರಾಣೀ ರಗುತಾನೂ ರುಚಿಲ್ವಂತೇ!' ಕುದ್ರೆನೊಣಾನೇ ಹೇಳ್ತು ಅಂತೀನಿ. ನೀ 'ಹುಂ' ಅನ್ನಬೇಕು. ಸುಳ್ಳು ಸಾಕ್ಸಿ ಹೇಳ್‌ಬೇಕು" ಅಂತು.

"ನಾ ಸುಳ್ಳೇಳೋದಿಲ್ಲ" ಅಂತು ಬಸವಣ್ಣ.



"ನೀ ಹೇಳ್ದೇ ಹೋದ್ರೆ ನಿನ್ನ ಮೇಯಿಸೋರು ಯಾರು ? ನೀರೂ–ನಿಡಿ ನೋಡೋರ್ ಯಾರು ? ನಿನ್ನ ಕೈಯಿ–ಮೈಯ್ಯೀ ಉಜ್ಜೋರ್ ಯಾರು ? ಮಾಡ್ದ ಉಪ್ಕಾರ ಮರೀಬಾರ್ದು. ಬಾ ಹೋಗಾನ" ಅಂತು.

ಬಸವಣ್ಣಂಗೂ ಇದು ನಿಜ ಅನ್ನುಸ್ತು. 'ನಡೀ' ಅಂತು. ಇಬ್ರೂ ಪರಮೇಸ್ವರ್ನತ್ರ ಬಂದ್ವು. ಪರಮೇಸ್ವರ ಕೇಳ್ದ :

"ಏನ್ ಬಂದೆ ಎಂಟೇಗೋದ್ವ?"

"ಸ್ವಾಮೀ, ನೀವ್ ಕುದ್ರೆನೊಣ ಕಳ್ಸಿದ್ರಂತಲ್ಲ, ರಗ್ತ ಪರೀಕ್ಷೆ ಮಾಡಾಕೆ ?"

"ಹುಂ ಹುಂ! ಎಲ್ಲಿ ಅವ್ನು?"

"ಸ್ವಾಮೀ, ಎಲ್ಲಾರ ರಗುತಾನೂ ಪರೀಕ್ಸೆ ಮಾಡ್ಕಂದು ದಣ್ದು ಸುಸ್ತಾಗಿ ನನ್ನತ್ರ ಬಂತು. ಎಲ್ಲಾನೂ ಹೇಳ್ತು. 'ಹಾರೋಕಾಗ್ದು, ಏರೋಕ್ಕಾಗ್ದು ನೀನೇ ಹೋಗಿ ಹೇಳ್ಬಾ' ಅಂತು. ಬಂದಿವ್ನಿ."

"ಯಾವ ಪ್ರಾಣಿ ರಗ್ತ ರುಚಿ ಅಂತೆ?"

"ಯಾವ್ದೂ ರುಚಿ ಇಲ್ವಂತೆ!"

"ಇದ್ನ ನಾ ಹೆಂಗ್ ನಂಬ್ಲೀ, ಯಾರಾದ್ರೂ ಸಾಕ್ಸಿ ಇದ್ದಾರಾ?"

"ಈ ಬಸ್ವಣ್ಣ ಇದ್ವ ಸ್ವಾಮಿ, ಇವ್ನೇ ಕೇಳಿ?"

"ಏನ್ ಬಸ್ವಣ್ಣ, ಇದು ನಿಜ್ವಾ? ಆ ಕುದ್ರೆನೋಣ ಹಿಂಗಂತ ಹೇಳ್ತ?"

"ಹುಂ!" ಅಂತು ನಾಲಗೆ ಮುಂದ್ಗಡೆ, ಹಿಂದ್ಗಡೆ ಬಾಲ 'ಇಲ್ಲ, ಇಲ್ಲ!' ಅಂತು. ಬಸವಣ್ಣನ ಬಾಲದ ಮಾತು ಗೊತ್ತಾಗ್ದೆ ಪರಮೇಸ್ವರ ಅದರ ನಾಲ್ಗೇ ಮಾತ್ನೆ ನಂಬ್ದ.

– ಬಸ್ವಣ್ಣನ ಬಾಲ್ದಲ್ಲೇ ಸತ್ಯ ಇರಾದು ! ಅದ್ಕೆ ಯಾರೂ ಬಾಲ ಮುಟ್ಟಿ ಸುಳ್‌ಪಳ್ ಆಣೆ ಪ್ರಮಾಣ ಮಾಡಲ್ಲ.



# ಎಮ್ಮೆ-ಕಂಬ್ಳಿ ಪಾಲು

ಒಂದೂರಲ್ಲಿ ಅಣ್ಣ ತಮ್ಮ ಇದ್ರು. ಅವ್ರಗ, ಇರಾಕ ಒಂದ್ಮನೆ, ಕೆರೆಯಾಕ ಒಂದು ಎಮ್ಮೆ, ಹೊದಿಯಾಕ ಒಂದು ಕಂಬ್ಳಿ ಇತ್ತು. ಬತ್ತಾ ಬತ್ತಾ ಪಾಲಾಗೋ ಕಾಲ ಬಂತು. ಆಗ ಅಣ್ಣ ಏನ ಮಾಡ್ದ ? ಒಂದು ಮನೇನ ಎರ್ಡು ಮಾಡಿ ತಮ್ಮಂಗರ್ಧ ಕೊಟ್ಟು, "ನೋಡು ತಮ್ಮ, ಒಂದು ಎಮ್ಮೇನ ಎರ್ಡು ಮಾಡೋಕ್ಕಾಗ್ದು, ಒಂದು ಕಂಬ್ಳೀನಾ ತುಂಡು ಮಾಡೋಕ್ಕಾಗ್ದು. ನಾ ಹೇಳ್ದಂಗೆ ನೀ ಕೇಳ್ತೀನಿ ಅನ್ನೋದಾದ್ರೆ ಸಮಸಮ ಪಾಲು ನಾ ಮಾಡಿಕೊಡ್ತೀನಿ" ಅಂದ. ತಮ್ಮ ಏನೂ ತಿಳೀದೋನು "ಆಯ್ತಣ್ಣ" ಅಂದ.

ಅಣ್ಣ ಜಾಣ, ಎಮ್ಮೆ ಮಧ್ಯಕ್ಕೆ ಸುಣ್ಣದ ಪಟ್ಟೆ ಹಾಕಿ ಎರ್ಡು ಭಾಗ ಮಾಡಿ, "ಹಿಂದುಲ್ದ ನಾ ಇಟ್ಕೋತೀನಿ. ಮುಂದಲ್ದು ನೀ ಮಡಕ್ಕೋ" ಅಂದ. ತಮ್ಮ "ಆಯ್ತಣ್ಣ" ಅಂದ.

"ಈ ಕಂಬ್ಳೀ ಹಗಲೆಲ್ಲಾ ನೀ ಹೊದ್ಕೋ, ರಾತ್ರಿ ನಾ ಹೊದ್ಕೋತೀನಿ" ಅಂದ. ತಮ್ಮ ಅದ್ಕೂ "ಆಯ್ತಣ್ಣ" ಅಂತ ಒಪ್ಕೊಂಡ.

ತೀರ್ಮಾನ್ದ ರೀತೀನೇ ಮುಂದ್ಲು ಬಾಗದ ಪಾಲುದಾರ್ನಾದ ತಮ್ಮ ಹಗ್ಲೆಲ್ಲ ಕಂಬ್ಳಿ ಹೊದ್ಕೊಂದು, ಎಮ್ಮೆ ಅಟ್ಕಂದೋಗಿ ಹುಲ್ಲು ಮೇಯ್ಸಿ ನೀರ್ ಕುಡ್ಸಿ ಸಂದ್ಯಾಗ ತಂದು ಕೊಟ್ಗೇಗೆ ಕಟ್ಟೋನು.

ಹಿಂದ್ಲ ಬಾಗದ ಪಾಲ್ದಾರ್ನಾದ ಅಣ್ಣ ಹಾಲ್ ಕರ್ಕಳ್ಳೋದು, ಆ ಹಾಲ್ನ ಮಾರ್ಕಳ್ಳೋದು, ರಾತ್ರಿ ಕಂಬ್ಳಿ ಹೊದ್ದು ಬೆಚ್ಚಗೆ ಮಲಗೋದು.

ಪಾಪ. ಕಸ್ಟಬಿದ್ದು ಎಮ್ಮೆ ಮೇಯ್ಸೋ ತಮ್ಮ ಹನಿ ಹಾಲ್ ನೋಡ ! ಮೂರು ಕಾಸ್ ಬ್ಯಾರೆ ನೋಡ ! ಗಡಗಡ ಚಳೀಗೆ ನಡುಗೋನು ರಾತ್ರ್ಯೆಲ್ಲಾ.

ಹಿಂಗೇ ಆಗಿ ಆಗಿ, ಅಣ್ಣ ತಿಂದ್ ತಿಂದ್ ಕುಂಬ್ಳಕಾಯಿ ಆದ ! ತಮ್ಮ ಸೊರಗಿ ಸೊರಗಿ ಸ್ವಾರೇ ಕಾಯಾದ.

ಒಂದಜ್ಜಿ ಇದ್ನೆಲ್ಲಾ ನೋಡ್ತಾ ಇದ್ಲು. ಆ ತಿಳೀದ ತಮ್ಮನ್ನ ಒಂದಿನ ಹತ್ರ ಕರ್ದು ಯಾಕಿಂಗೇಂತ ಕೇಳಿದ್ಲು. ತಮ್ಮ ಹಿಂಗಿಂಗೆ ಹಿಂಗಿಂಗೆ ಅಂತ ಎಲ್ಲಾ ಹೇಳ್ದ. ಅಜ್ಜಿ 'ಹಿಂಗ್ ಮಾಡು' ಅಂತ ಒಂದು ಉಪಾಯ ಹೇಳ್ಕೊಟ್ಲು.

ಮಾರನೇ ದಿನ ಅಣ್ಣ ಹಾಲ್ ಕರೆಯೋವಾಗ, "ಅಣ್ಣ, ನಂಗ್ಯಾಕೆ ಹಾಲಲ್ಲಿ ಪಾಲು ಕೊಡ್ತಾ ಇಲ್ಲ?" ಅಂದ ತಮ್ಮ. ಅದ್ಕ ಅಣ್ಣ, "ನಿನ್

ಬಾಗ್ದಲ್ಲಿ ನಾನ್ ಕರೀತಾ ಇಲ್ವಲ್ಲ ! ನನ್ ಬಾಗ್ದಲ್ಲಿ ಕರ್‍ಕೋತಾ ಇವ್ನಿ. ನೋಡು ಈ ಸುಣ್ಣದ ಪಟ್ಟೆ ಮುಂದ್ಲುದು ನಿಂದು, ಹಿಂದ್ಲುದು ನನ್ದು" ಅಂದವ್ನೇ ಕರೆಯೋದ ಮುಂದುವರ್‍ಸದ.

ಅಜ್ಜಿ ಹೇಳ್ಕೊಟ್ಟಿದ್ಹಂಗೇನೆ ತಮ್ಮ ಎಮ್ಮೆ ಮೂಗ್ದಾರಾನ ಎರ್‍ಡೂ ಕೈಲಿಡ್ಡು ಆಡುಸ್ದ. ಎಮ್ಮೆ ತಡೀನಾರ್‍ದೆ ಕುಣಿಯೋಕೆ ಶುರುವಾಯ್ತು. ಅಣ್ಣಂಗ ಹಾಲ್ ಕರೆಯೋಕ್ಕೆ ಆಗ್ದೆಹೋಯ್ತು. "ಯಾಕೋ?" ಅಂದ.

"ಮುಂದ್ಲು ನನ್ ಬಾಗ ನಾ ಏನಾರಾ ಮಾಡ್ಕೋತೀನಿ ; ಕೇಳಾಕ ನೀ ಯಾರು ?" ಅಂದಿದ್ದೇ ಕುಣ್ಸಿದ್ದೇ ಕುಣಿಸಿದ್ದು ! ಎಮ್ಮೆ ಹಾಲು ಕರೆಯಗೊಡ್ಲೇ ಇಲ್ಲ.

ಅವತ್ತು ಸಂಜೇಗ ಅಜ್ಜಿ ಹೇಳ್ಕೊಟ್ಹಂಗೇನೇ ಹೆಗಲ ಮ್ಯಾಲ್ನ ಕಂಬ್ಳಿ ತಗ್ದು, ಕೆರೆ ನೀರ್‍ಗ ಅದ್ದಿ ಒದ್ದೆ ಒದ್ದೇನೆ ತಂದು ಅಣ್ಣಂಗ ಕೊಟ್ಟ. "ಯಾಕೋ?" ಅಂದ ಅಣ್ಣ.

"ಹಗ್ಲು ನನ್ದು. ನಾ ಏನಾರ ಮಾಡ್ತೀನಿ, ನೀ ಯಾರ್ ಕೇಳಾಕ?" ಅಂದ.

ಒಂದಿನ ತಾನೇ ಸರೋಯ್ತುದೆ ಅಂತ ಅಣ್ಣ ತಡ್ಕಂಡ. ತಮ್ಮ ದಿನಾ

ಹಿಂಗೇ ಮಾಡೋಕ್ಕೆ ಸುರು ಮಾಡ್ದ. ತಡೀನಾರ್ದೆ ಅಣ್ಣ ತಾನಾಗಿ, "ನೀನು ಒಂದ್ವಾರ ಮೇಯಿಸು, ಹಾಲ್ ಕರ್ಕಾ, ನಾನ್ ಒಂದ್ವಾರ ಮೇಯಿಸ್ತೀನಿ, ನಾ ಹಾಲ್ ಕರ್ಕೋತೀನಿ. ಈ ಕಂಬ್ಳಿ ನೀನೊಂದು ದಿನ ಹೊದ್ಕಾ, ನಾ ಒಂದಿನ ಹೊದ್ಕೋತೀನಿ, ಒಪ್ಪಿಗೆಯಾ?" ಅಂದ.

ತಮ್ಮ "ಆಯ್ತಣ್ಣ" ಅಂದ.

ಅವತ್ನಿಂದ..... ಇಬ್ಬರೂ ಸುಕ್ವಾಗಿ ಇದ್ರು.

# ಉಗುರಕಣ್ಣಲ್ಲಿ ಅನ್ನ

ಒಂದೂರಲ್ಲಿ ಒಬ್ಬಮ್ಮ ಇರ್ತಳೆ. ಇವಳಿಗೆ ಇಬ್ರು ಮಕ್ಳು. ಒಬ್ಬನ ಹೆಸ್ರು ಸೂರ್ಯ. ಮತ್ತೊಬ್ಬನ ಹೆಸ್ರು ಚಂದ್ರ. ಇವರು ಬಾಳ ಬಡವ್ರು. ಹೊಲಗದ್ದೆ ಏನೂ ಇರಲ್ಲ. ಈಯಮ್ಮ ಕೂಲಿ ಮಾಡ್ಕಂಡು ಜೀವನ ಹೊರೀತ, ಈ ಮಕ್ಳ ಸಾಕ್ಕೊಂಡು ಇರ್ತಳೆ.

ಹಿಂಗಿದ್ದಾಗ ಒಂದು ಸಲ ಈಯಮ್ಮ ಕಾಯಿಲೆ ಬಿದ್ಲು, ಕೂಲಿ ಗೋಗೊಕಾಗ್ಲಿಲ್ಲ. ಮನೇಲಿ ಉಣ್ನೋಕೆ ತಿನ್ನೋಕೆ ಏನೂ ಇಲ್ದಂಗಾಯ್ತು. ಈ ತಾಯಿ ಮನಗಿದ್ದೋಳು ಏಳೋಕೆ ಆಗದಂಗೆ ನರಳ್ತಿರ್ತಾಳೆ. ಆಗ ಪಕ್ದೂರಲ್ಲಿ ಒಂದು ಮದ್ವೆ ಆಯ್ತಾ ಇರ್ತದೆ. ಈಯಮ್ಮ ಮಕ್ಕಳಿಗೆ : "ಹೋಗ್ರಪ್ಪ, ಪಕ್ದೂರಲ್ಲಿ ಮದ್ವೆ ಆಯ್ತಾದೆ. ನೀವು ಉಂಡ್ಕಂಡು, ನಿಮ್ಮ ಉಗುರಕಣ್ಣಲ್ಲಿ ನಂಗೂ ಒಂದಿಸ್ಟು ತಕ್ಕಂಬರ್ರಿ" ಅಂತಳೆ.

ಸೂರ್ಯ ಚಂದ್ರ ಪಕ್ಕದೂರಿಗೆ ಹೋಯ್ತರೆ. ಅಲ್ಲಿ ಮದ್ವೆ ಮನೆಗೆ ಹೋಗಿ ಊಟ ಮಾಡ್ತರೆ. ಉಣ್ಣುವಾಗ ಚಂದ್ರ 'ಅಮ್ಮನಿಗೆ' ಅಂತ ಅನ್ನ ಇರಿಸಿಕಳ್ತನೆ. ಸೂರ್ಯ ಇರಿಸಿಕಳಲ್ಲ. ಆಮೇಲೆ ಇಬ್ಬರೂ ಮನೆಗೆ ಬರ್ತಾರೆ.

ಅಮ್ಮ "ಉಂಡ್ರಪ್ಪ?" ಅಂತ ಕೇಳ್ತಳೆ. 'ಹೂಂ' ಅಂತರೆ. "ನಂಗೆಷ್ಟು ತಂದ್ರಿ?" ಅಂತ ಬಟ್ಟಲು ಮುಂದಕ್ಕೆ ಮಡಗ್ತಾಳೆ. ಸೂರ್ಯ "ನಂಗೇ ಸಾಲಲಿಲ್ಲ. ಇಕ್ಕಿದ್ರೆ ಇನ್ನೂ ಉಣ್ತಿದ್ದೆ" ಅಂತನೆ. ಚಂದ್ರನ ಕಡೀಕೆ ತಾಯಿ ನೋಡ್ತಾಳೆ. ಚಂದ್ರ ತನ್ನ ಕೈ ಉಗುರಕಣ್ಣ ಕೊಡವ್ತನೆ. ಅವ್ವ ಉಣ್ನೋ ಅಸ್ಟು ಬಟ್ಟಲಲ್ಲಿ ತುಂಬ್ಕಂತದೆ ! ಅವಾಗ ಅಮ್ಮ ಸೂರ್ಯಂಗೆ "ನೀನು ಯಾವಾಗ್ಲೂ ಧಗಧಗ ಉರಿತಿರು" ಅಂತಾಳೆ. ಚಂದ್ರಂಗೆ "ನೀನು ಯಾವಾಗ್ಲೂ ತಣ್ಣಗಿರು" ಅಂತಾಳೆ.

– ಅದ್ಕೆ ಸೂರ್ಯ ಉರೀತವ್ನೆ, ಚಂದ್ರ ತಣ್ಣಗಾವ್ನೆ.



# ಹಾಲು - ನೀರು

ಒಂದೂರ್ನಲ್ಲಿ ಇಬ್ರು ಹೆಂಗ್ಸರಿದ್ರು, ಒಬ್ಳು ಒಂದ್ ಎಮ್ಮೆ ಕಟ್ಟಿದ್ಳು, ಇನ್ನೊಬ್ಳು ಹತ್ತೆಮ್ಮೆ. ಇಬ್ರೂ ಹಾಲಾಕ್ತಾ ಇದ್ರು. ಒಂದಿನ ಈ ಹತ್ತೆಮ್ಮೆ ಕಟ್ಟಿದ್ದೋಳು ಒಂದೆಮ್ಮೆ ಕಟ್ಟಿದ್ದೋಳ್ ಹತ್ರ ಬಂದು, "ವರ್ತ್ನೆಯೋರ್ಗ ಹಾಲ್ ಸಾಲ್ದೀರಾ ಬಂದ್‌ಬಿಟ್ಟೈತೆ, ಒಂದ್ಸೇರು ಹಾಲ್ ಸಾಲ ಕೊಡು, ವಾಪಸ್ಸು ಕೊಟ್ಟು ಬುಡ್ತೀನಿ" ಅಂತ್ಹೇಳಿ ಸಾಲ ತಕ್ಕಂಡೋದ್ಳು.

ವರ್ಸಾನುಗಟ್ಲೆ ಆಗೋಯ್ತು. ವಾಪ್ಸ ಕೊಡ್ಲೇ ಇಲ್ಲ. ಈ ಒಂದೆಮ್ಮೆ ಕಟ್ಟಿರೋಳ್ಗೆ ಮುತುವರ್ಜಿ ; ಆ ಒಂದ್ಸೇರು ಹಾಲು ಬುಟ್ ಬುಡೋಕೆ ಮನ್ಸಾಗ್ದೆ ಹೋಗಿ ಕೇಳಿದ್ಳು. ಕೇಳಿದ್ಕೆ ಆ ಹತ್ತೆಮ್ಮೆ ಕಟ್ಟಿದ್ದೋಳು : "ಇನ್ನೊಂದ್ಸಾರಿ ಕೇಳಿದ್ರೆ ಮರ್ಯಾದೆ ಮಾಡಿಬುಡ್ತೀನಿ. ಯಾವೋಳ್ ನೀನು ನನ್ ಮನ್ಯಾಗ ಐದು ವದ್ದುಕೊಂಡ್ರು ಐದು ಕರೀತಾವೆ. ನಿನ ಬಂಜಾಯಿ ಒಂದು ಎಮ್ಮೆ ಮಡ್ಗಿರೋಳ ಮನೇಗ ಹಾಲಿಗ ಬಂದಿದ್ನಾ? ಬಾಯಿ ಮುಚ್ಕೊಂಡು ಹೋಗ್ದೋಗು!"

– ಅಂತ ದಬಾಯ್ಸಿ ಕಳ್ಸಿದ್ಳು. ಪಾಪ, ಈ ಒಂದೆಮ್ಮೆಯೋಳು ಸಂಕ್ಟ

ತಡೀನಾರ್ದೆ ಹೋಗಿ ಆ ಊರು ದೊರೇಗೆ ದೂರು ಕೊಟ್ಟು. ದೊರೆ ಕರ್ರ್ಸಿ ಕೇಳ್ದ. "ಏನು ಸ್ವಾಮಿ ; ಅವ್ಳು ಏನೋ ಹೇಳ್ತಾಳೆ ಸರಿ ; ಅದ್ನ ನೀವೂ ನಂಬ್ತೀರಾ, ಹತ್ತೆಮ್ಮೆ ಇರೋಳು ನಾನು ; ಈ ಒಂದೆಮ್ಮೆಯೋಳ ಹತ್ರ ಸಾಲಕ್ಕೋಗೋದುಂಟಾ? ಸಾಲ ತರೋದುಂಟಾ?!" ಅಂತ ದೊರೇಗೂ ದಬಾಯ್ಸಿ ಬುಟ್ಳು ಇವ್ಳು.

ಆಗ ದೊರೆ ಯೋಚ್ನೆ ಮಾಡಿ, "ಮೂರು ದಿನ ಬುಟ್ಕೊಂಡ್ ನಾಲ್ಕನೆ ದಿನ ಬೆಳಬೆಳಿಗ್ಗೇನೆ ಇಬ್ರೂ ಇಲ್ಲುಗ ಬನ್ನಿ. ನಾನು ನ್ಯಾಯ ಕೊಡ್ತೀನಿ" ಅಂತ ಕಳುಸ್ದ. ಅವ್ರು ಅತ್ತ ಹೋದ್ರು. ಇತ್ತ ದೊರೆ ಬಾಗ್ಲು ಕಾಯೋರ್ನ ಕರ್ದು, "ಮೂರ್ದಿನ ಆದ್ಮೇಲೆ ಇವ್ರು ಬರ್ತಾರೆ. ಬಂದಾಗ ಬಾಗ್ಲಲ್ಲಿ ಎರ್ಡೂ ಕಡೆ ಎರ್ಡು ಹಂಡೆ ಇಡಿ. ತುಂಬಾ ನೀರು ತುಂಬಿ, ಒಂದೊಂದು ಚೆಂಬಿಡಿ. ಇಬ್ರುಗೂ ಕೈಕಾಲು ತೊಳ್ಕೊಂಡು ಆಮ್ಯಾಕ ಒಳಗ ಬರೋದಕ್ಕೇಳಿ" ಅಂತ ಆಗ್ನೆ ಮಾಡ್ದ.

ನಾಕ್ನೇ ದಿನ ಹತ್ತೆಮ್ಮೆಯೋಳು ಬೆಳಿಗ್ಗೆ ಬೆಳಿಗ್ಗೆ ಮುಂಚೇನೆ ಬಡಾ ಬಡಾ ಅಂತ ಬಂದುಬುಟ್ಲು. ಬಾಗ್ಲು ಕಾಯೋರು 'ರಾಜಾಜ್ಞೆ ಹಿಂಗಿಂಗೆ' ಅಂತ ಹೇಳುದ್ರು. "ಇಸ್ಟೊತ್ತಾದ್ರೂ ಕೈಕಾಲು ಮೊಖ ತೊಳೀದೇನೆ ಇರ್ತೀವಾ?" ಅಂತ ಗೊಣಿಕ್ಕೊಂಡು ಹಂಡೇ ನೀರ್ನ ಪೂರ್ತಾ ಪಾದಕ್ಕ ಬಗ್ಗಿಸ್ಕೊಂಡು ಒಳಕ್ಕ ಬಂದ್ಲು.

ಇದಾದ್ಮ್ಯಾಲೆ ಆ ಒಂದೆಮ್ಮೆಯೋಳು ಬಂದ್ಲು. ಬಾಗ್ಲು ಕಾಯ್ತಿದ್ದೋರು ಅವುಳ್ಗೂ ಅದ್ನೇ ಹೇಳುದ್ರು. ಆಯಮ್ಮ ಒಂದು ಚೆಂಬು ನೀರು ತಕ್ಕಂಡು, ಆ ಒಂದು ಚೆಂಬು ನೀರ್ನಲ್ಲೇ ಕೈಯ್ಯಿ, ಕಾಲು, ಮೊಕಾನೆಲ್ಲಾ ತೊಳ್ಕೊಂಡು ಒಳುಗ ಬಂದ್ಲು.

ಹಿಂದೇನೆ ದೊರೆ ಬಂದ. ಎರಡೂ ಹಂಡೆ ನೋಡ್ದ. "ಈ ಖಾಲಿ ಹಂಡೇಲಿ ಕೈ ಕಾಲು ತೊಳ್ದದ್ದು ಯಾರು?" ಅಂದ.

"ನಾನೇ!" ಅಂದ್ಲು ಹತ್ತೆಮ್ಮೆಯೋಳು.

"ಈ ತುಂಬ್ದ ಹಂಡೆ ನೀರ್ನ ಹಂಗೆ ಬಿಟ್ಟಿರೋರು ಯಾರು?" ಅಂದ ದೊರೆ.

"ನಾನೇ ಸ್ವಾಮ್ಯೋರಾ!" ಅಂದ್ಲು ಒಂದೆಮ್ಮೆಯೋಳು ಅಂಜಂಜ್ಕೊಂಡು.

ದೊರೆ ಇಬ್ರ ನೋಡಿ ನಕ್ಕೋತಾ ಮನಸಲ್ಲಿ 'ನಟ್ಗೆ ನೀರು ಬಳ್ಸೋಕೆ ಬರ್ದೋಳು ಹಾಲ್ನೂ ಹಿಂಗೆ ಬಳಸ್ಯಾಳು, ನೀರ್ನ ಬಳಸ್ದಂಗೆ ಹಾಲ್ನೂ ದುಂದಾಗಿ ಬಳಸಿದ್ದಾಳೆ' ಅಂತ ಅಂದಾಜು ಮಾಡ್ದ.

"ನೀ ಸಾಲ ತಕ್ಕಂಡಿರಾದು ನಿಜ, ಮರ್ಯಾದೆಯಾಗಿ ಆ ಒಂದ್ಸೇರು ಹಾಲು ವಾಪಸ್ಸು ಕೊಡು, ಇಲ್ಲ ಒಂದ್ಸೇರು ಹಾಲ್ನ ದುಡ್ಡು ಕೊಡು. ಇಲ್ದಿದ್ರೆ ಸಿಕ್ಸೆ ಕೊಡ್ತೀನಿ" ಅಂತ ನ್ಯಾಯ ಕೊಟ್ಟ.





## ಗೂಬಗೆ ಪಟ್ಟ ತಪ್ಪಿದ್ದು

ಈ ಪಕ್ಸಿ ಜಾತ್ಯೆಲ್ಲಾ ಸೇರಿ 'ಯಾರ್ಗ ಪಟ್ಟ ಕಟ್ಬೇಕು' ಅಂತ ನ್ಯಾಯ ಮಾಡ್ದೊ. 'ಗೀಜನಕ್ಕಿ ಸ್ರೇಸ್ಟವಾದ್ದು ಅದ್ಕೆ ಪಟ್ಟ ಕಟ್ಬೇಕು' ಅಂತಾಯ್ತು. ಈ ಗೂಬೆ ಇತ್ತಲ್ಲ; ಅದು "ಏನ್ ನೀವು ನ್ಯಾಯ ಮಾಡೋದು ? ತಲೆ ನೋಡಿ ಪಟ್ಟಕಟ್ಟಿ!" ಅಂತು. "ಅದ್ಕ ವಸಿ ತಲೆ ದಪ್ಪ ! ನನ್ಗೇ ಪಟ್ಟ ಕಟ್ನೀ" ಅಂತ ಜಗಳ ತಗೀತು.

ಪಕ್ಸಿಗಳೆಲ್ಲಾ ಸೇರಿ, "ಆ ಸೀಗೆ ಪರ್ವತಾನ ಬಳಸ್ಕಂದು ಯಾರ್ ಮುಂದಾಗಿ ಬತ್ತಾರೋ ? ಅವುರ್ಗ ಪಟ್ಟ ಕಟ್ತೀವಿ!" ಅಂತ ತೀರ್ಪು ಕೊಟ್ಟು, ಗೂಬೆ, ಗೀಜನಕ್ಕಿ ಎರ್ಡೂ ಸೀಗೆ ಪರ್ವತದ ಕಡೆ ಹೊಂಟ್ವು.

ಗೀಜನಕ್ಕಿ ಸಣ್ಣದು, ಮೆಳೆ ಮೆಳೆ ನುಗ್ಗಕಂದು ಗಿಗ್‌ಕಂದು ಬಿರ್ರನೆ ಬಂದು ಬುಡ್ತು. ಗೂಬೆ ದಪ್ಪದು, ಎಲ್ಲೋ ಒಂದ್ ಸೀಗೆಮೆಳೇಗೆ ತಗುಲಾಕ್ಕಂದು ಬರೂಕ್ಕಾಗ್ನಿಲ್ಲ.

ಸರಿ. ರೆಕ್ಕುಟ್ಟಿದ ಜಾತ್ಯೆಲ್ಲಾ ಸೇರಿ ಗೀಜನಕ್ಕೀಗ ಪಟ್ಟ ಕಟ್ಟೇ ಬಿಟ್ರು.



ಗೂಬೆ ಸಂದೇ ಹೊತ್ತಗ ಬಂತು. ಪಟ್ಟ ಕಟ್ಟೇ ಬಿಟ್ಟಿದ್ನ ನೋಡಿ ತಿರುಗಾ ಜಗಳ್ಕ ಸುರು ಮಾಡ್ತು.

ಆವಾಗ ಎಲ್ಲಾ ಪಕ್ಸಿ ಸೇರ್ಕಂದು ಗೂಬೇನಾ ಮುತ್ತಿ ಕಿತ್ತು, ಕಡ್ದು, ದೂರಾ ದೂಡ್ ಬುಟ್ರೋ. ಅದ್ಕೆ ಗೂಬೆ ಇವತ್ತಗೂ ಯಾರ ಜೊತೇನೂ ಸೇರ್ದೆ ಒಂಟಿಯಾಗಿರ್ತದೆ. ಹಗಲೊತ್ತು ಯಾರ ಕಣ್ಗೂ ಬೀಳ್ದೆ ಬಚ್ಚಿಟ್ಕಂದಿದ್ದು ರಾತ್ರಿ ಮಾತ್ರ ಹೊರಗೆ ಬತ್ತದೆ – ಆಹಾರ ಹುಡಕ್ಯಂದು.

# ತೆರ್‍ಲೋ ಮರ್‍ಲೋ ಹೋಯ್ !

ಒಂದೂರು. ಆ ಊರು ಸುತ್ತೂರ್‍ಲೂ ಒಂದು ಕ್ವಾಟೆ. ಆ ಕ್ವಾಟೇಕ ಒಂದೇ ಒಂದು ಬಾಗ್ಲು. ಸಾಯಂಕಾಲ ಆದ್ರೆ ಆ ಬಾಕ್ಲುಕ ಬೀಗ್ಹಾಕ್ಬುಡ್ತಾರೆ. ಯಾರೂ ಹೊರ್‍ಗಡೆ ಹೋಗಂಗಿಲ್ಲ. ಹೊರ್‍ಗಡೆಯೋರೂ ಯಾರೂ ಒಳ್ಗಡೆ ಬರಂಗಿಲ್ಲ. ಅಂಥ ಕ್ವಾಟೆ ! ಅಂಥ ಊರು !

ಇಂಥ ಊರಾಗ ಒಬ್ಬ ಮುದ್ಕಿ ಮೊಮ್ಮಗನ್ನ ಸಾಕ್ಕೊಂಡಿದ್ಲು. ಆ ಮೊಮ್ಮಗ ಒಂದು ಕ್ವಾಣ್ನ ಮೇಸ್ತಿದ್ದ. ರಾತ್ರಿ ಎಲ್ರೂ ಮಲಗಾದ್ಮೇಲೆ ಆ ಕ್ವಾಣ್ನ ಹೆಗಲ ಮ್ಯಾಲಿಟ್ಕೊಂಡು, ಈ ಕ್ವಾಟೆ ಎಕ್ಕಿ ಇಳ್ದು ಕ್ವಾಟೆ ಆಚ್ಗೆ ಹೋಗೋನು. ಊರೋರ ಹೊಲಗಳಾಗೆಲ್ಲ ಮೇಸೋನು. ಕೋಳಿ ಕೂಗೋ ಹೊತ್ತ್ಗೆ ಆ ಕ್ವಾಣ್ನ ತಿರುಗಾ ಹೆಗಲ ಮ್ಯಾಲೆ ಹೊತ್ಕೊಂಡು ಆ ಕ್ವಾಟೆ ಎಕ್ಕಿ ಇಳ್ದು ಬಂದು ಮನೆ ಸೇರ್‍ಕೊಂಡ್ಬುಡೋನು. ಹಿಂಗೆ ಪ್ರತಿನಿತ್ಯ ಮಾಡಿ ಮಾಡಿ ಊರೋರ ಹೊಲಗಳ್ನೆಲ್ಲ ಮೇಯ್ಸಿಬುಟ್ಟ.

ಜನ 'ಇದ್ನ ಪತ್ತೆ ಹಚ್ಚಬೇಕು ಅಂತೇಳಿ ಒಂತಾವ ಅಗನಿಗೊಂಡ ಹಾಕಿಬುಟ್ಟು ಬಂದ್ಬುಟ್ರು. ಇವ್ನು ಯಾವತ್ನಂಗೆ ಅವತ್ತೂನು ಕ್ವಾಣ್ನ ಹೆಗಲ

ಮ್ಯಾಲೆ ಹೊತ್ಕೊಂಡ, ಕ್ಯಾಟೆ ಎಕ್ಕಿ ಇಳ್ದ. ಕ್ಯಾಣ್ನ ಮೇಯೋಕೆ ಬಿಟ್ಟ. ಈ ಅಗನಿಗೊಂಡದ ಕಿಚ್ಚು ಕಣ್ಣುಕ ಬಿತ್ತು. ಏನ್ ನಿಗಿನಿಗಿ ಜೇಯ್ತಾ ಅದೆ ! 'ಸಳಿಕ ಕಿಚ್ಚು ಕಾಯೂನ' ಅಂದಿದ್ದೆ ಹೋಗಿ ಕೂತ್ ಬುಟ್ಟ. ರಾತ್ರ್ಯೆಲ್ಲ ಚೆನ್ನಾಗಿ ಕಿಚ್ಚು ಕಾದ ಮೈಕೈ ಮುದಗೂಡಿಬುಡ್ತು. ಕೋಳಿ ಕೂಗ್ತು.

'ಅರೆರೆರೆ! ಕೋಳಿ ಕೂಗ್ಬುಡ್ತಲ್ಲ, ಬೆಳಕು ಹರ್ದುಬುಡ್ತದೆ' ಅಂದಿದ್ದೆ ಓಡ್ಹೋಗಿ ಕ್ಯಾಣ್ನ ಹೆಗಲ ಮ್ಯಾಲೆತ್ಕ್ಯಂಡು ಕ್ಯಾಟೆ ಎಕ್ಕೋಕ್ಕೋದ. ಆಗಲಿಲ್ಲ. ಏನ್ ಮಾಡಿದ್ರೂ ಕ್ಯಾಟೇನ್ನ ಎಕ್ಕೋಕೇ ಆಗ್ಲಿಲ್ಲ. 'ಓಹೊಹೋ! ಈ ಬೆಂಕಿ ಕಾದಿದ್ದೆ ಮಿಸ್ಟೇಕು. ಏನ್ ಮಾಡೋದೀಗ ? ಜನ ಬಂದ್ಬುಡ್ತಾರಲ್ಲ, ಬೆಳಕಾಗಿ ಬುಡ್ತು' ಅಂದ್ಗಂಡು ಬೇಳಾಡೋ ಹೊತ್ತಕ ಸರೀಗಾ ಜನ ಬಂದ್ಬುಟ್ರು. ಬಂದು ನೋಡ್ತಾರೆ ಇವ್ನ!

"ಓಹೋಹೋ ನಮ್ ಹೊಲಗಳ್ನ ಮೇಸ್ತಾ ಇದ್ದೋನು ಇವ್ನೆ, ಹಿಡೀರಿ ಅಂದಿದ್ದೆ, ಎಳ್ಕಂಡ್ಹೋಗಿ ನಡೀ ಊರಾಗಿರೋ ಹಜಾರ್ ಕಂಬಕ್ಕ ಕಟ್ಯಾಕ್ಬುಟ್ರು, ಈ ಮೊಮ್ಮಗನ್ನ.

ಕೋಳಿ ಕೂಗ್ತು, ಬೆಳಕ್ಹರೀತು. 'ಇಸ್ಟೊತ್ಗೆಲ್ಲ ಬತ್ತಾ ಇದ್ದ ಮೊಮ್ಮಗನು ಇವತ್ತು ಯಾಕೋ ಇನ್ನೂ ಬರ್ಲಿಲ್ವೆ?' ಅಂತ ಈ ಅಜ್ಜಿ ಯೇಸ್ನಿ ಮಾಡ್ಕಂಡು ಹಿಟ್ಟು ತೊಳುಸ್ತಾ ಅವ್ಳೆ, ಬಿಸಿ ಬಿಸಿ ! ಪಕ್ವಾಗ ಹುರುಳಿ ಸಾರ್ ಮಾಡಿ





ಮಡಿಗ್ಯವ್ಳೆ. 'ಯಾವಾಗೂ ಈ ಹಿಟ್ಟು ತೊಳ್ಸೊ ಹೊತ್ತಗ ಮೊಮ್ಮಗನು ಬಂದ್ಬುಡ್ತಾ ಇದ್ದ. ಇವತ್ತ್ಯಾಕೋ ಬರ್‍ಲೆ ಇಲ್ಲ, ಎಲ್ಲ್ಯಾದ್ರೂ ಇದ್ರೆ ಬತ್ತಾನೆ!' ಅಂದ್ಬುಟ್ಟು "ತೆರ್‍ಲ್ಲೋ ಮರ್‍ಲ್ಲೋ ಹೋಯ್!" ಅಂತ ಕೂಗು ಹಾಕಿದ್ಲು. ಹಿಂಗಂದ್ರೆ 'ಹುರುಳಿ ತೆರ್‍ಲ್ತಾ ಅದೆ. ಹಿಟ್ನೆಸ್ರು ಮರಳ್ತಾ ಅದೆ. ಹಿಟ್ಟು ತೊಳುಸ್ತಾ ಇದ್ದೀನಿ. ಬಿಸಿಬಿಸಿ ತಿನ್ನೋಕ ಬಾ!' ಅಂತ ಅರ್ಥ.

ಈ ಅಜ್ಜಿ ಕೂಗು 'ತೆರ್‍ಲ್ಲೋ ಮರ್‍ಲ್ಲೋ ಹೋಯ್!' ಅನ್ನೋದು ಹೋಗಿ ಅವ್ನ ಕಿವ್‌ಕ್ಯ ಬಿತ್ತು. ಅವ್ನು "ಹಜಾರ್ ಕಂಬ್ಕೆ ಡೀಲ್!" ಅಂತ ಕೂಗ್ದ. ಅಂದ್ರೆ 'ನನ್ನ ಹಿಡ್ದು ಹಜಾರ್ ಕಂಬಕ್ಕ ಕಟ್ಯಾಕವ್ರೆ' ಅಂತ ಅರ್ಥ. ಇದು ಬಂದು ಅಜ್ಜಿ ಕಿವ್ಯಾಕ್ಯ ಬಿತ್ತೋ ಇಲ್ಲೋ 'ಯಾರೋ ಮೊಮ್ಮಗನ್ನ ಕಂಬಕ್ಕ ಕಟ್ಯಾಕ ಬುಟ್ಟವ್ರೈ?' ಅಂದಿದ್ದೇ ಈ ಹಿಟ್ಟು ತೊಳುಸ್ತಾ ಇದ್ಲಲ್ಲ ಕೋಲು, ಆ ಕೋಲ್ನೆ ಎತ್ಕ್ಯಂಡು ಹೊರಟ್ಲು.

ಆ ಹಿಟ್ಟುಕೋಲು ಹಿಟ್ಟುಕು ಮಡಕೇಗೂ ಮೆತ್ತಿಕೊಂಡು, ಆ ಅಜ್ಜಿ ಆ ಕೋಲ್ನ ಎತ್ತಿಕೊಂಡು ಬರ್‍ತಾ ಇದ್ರೆ ಆಂಜನೆಯ ಗದೆ ಎತ್ಕ್ಯಂಡು ಬರ್‍ತಾನಲ್ಲ, ಆ ತರ ನೋಡ್ದೋರ್ ಕಣ್ಣುಗ ಕಾಣಿಸ್ಬುಡ್ತು. 'ಏನಪ್ಪಾ ಇದು ಗಾಸ್ಯಾರಾ ಈ ಮುದ್ಕಿ ಗದೆ ಎತ್ಕ್ಯಂಡ್ ಬರ್‍ತಾ ಅವ್ಳೆ. ಇನ್ನೇನ್ ಕಾದದೋ ನಡ್ರೀ ಅಂತ ಒಬ್ಬೊಬ್ರು ಜಾಗ ಖಾಲಿ ಮಾಡುದ್ರು.

ಯಾರೋ ಒಬ್ನು ಸರೀಗ ನೋಡಿದ್ನು. 'ಓಹೋ! ಇದು ಗದೆ ಅಲ್ಲ. ಹಿಟ್ಕೋಲು. ಹಿಟ್ಟುಕು ಮಡಕೆಗೂ ಮೆತ್ಕ್ಯಂಡ್ಬುಟ್ಟದೆ' ಅಂತೇಳ್ದ. ಆವಾಗ ಎಲ್ರೂ 'ಓಹೋ! ಈ ಅಜ್ಜಿ ಹಿಟ್ಟು ಈಸೊಂದು ಗಟ್ಯಗ್ಯ ತೊಳ್ಸಿ ಆ ಮೊಮ್ಮಗನ್ಕ ಇಕತಾಳೆ. ಅದ್ಕೆ ಅವ್ನು ಆ ಕ್ಯಾಣಾನ ಹೊತ್ಕೊಂಡು ಕ್ಯಾಟೆ ಎಕ್ತಾ ಇದ್ದಿದ್ದು ! ನಾವೂ ಹಿಂಗೆ ಗಟ್ಟಿಗ ತೊಳ್ಸಿರೋ ಹಿಟ್ಟು ತಿನ್ಬೇಕು' ಅಂತ ತಿಳ್ಕೊಂಡ್ರು.

ಆ ಅಜ್ಜಿ ಬಂದು ಮೊಮ್ಮಗನ್ನ ಬುಡ್ಸ್ಕೊಂಡೋದ್ಲು !



# ಪುಟುಕ್ ! ಜರಜರ ! ಡುಬುಕ್ ! ಮ್ಯಾ !

ಒಂದು ಪಟ್ಣ. ರಾಜ, ಮಂತ್ರಿ ಮಾರುವೇಸ್ದಲ್ಲಿ ಗಸ್ತು ತಿರುಗ್ತಾ ಇದ್ರು. ಸಾವುಡಿಯಲ್ಲಿ ಇಬ್ರು "ಪುಟುಕ್ ! ಜರಜರ! ಡುಬಕ್! ಮ್ಯಾ!" ಅಂತ ಹೇಳ್ಕ್ಯಂಡು ಪಕಪಕ ನೆಗಾಡ್ತಿದ್ರು. ಇವ್ರ ಕಿವ್ಗಿ ಆ ನಗೂ ಮಾತು ಬಿತ್ತು. ಅರ್ಥ ಏನಂತ ತಿಳೀಲಿಲ್ಲ. ಇಚಾರಸ್ತಾ ಹೋದ್ರು. ಜನ 'ಸೋಮೀ, ನಮ್ಗ ತಿಳೀದು ! ನಮ್ಗ ತಿಳೀದು!' ಅಂದ್ರು. ಅರ್ಮನೇಗ ವಾಪ್ಸ ಬರ್ತಿದ್ರು. ದಾರಿ ಪಕ್ದಲ್ಲಿ ಒಬ್ಬ ಕುರಿಕಾಯೋ ಹುಡ್ಗ ನಿಂತಿದ್ದ.

ರಾಜ–ಮಂತ್ರಿ ಮೊಕ ಇಳೀಬುಟ್ಕಂಡು ಬರೋದು ನೋಡ್ದ. 'ಯಾರೋ ಸಾವ್ಕಾರ್ರು. ಯಾಪಾರ ಸಾಪಾರ್ದಲ್ಲಿ ಲುಕ್ಸಾನಾಗಿರ್ಬೇಕು' ಅಂದ್ಕಂಡು, "ಯಾಕ್ ಸ್ವಾಮಿ, ಸಪ್ಪಂಗ ಅದೀರಿ?" ಅಂದ 'ನೋಡಾನ, ಇವನ್ಗೇನಾರೂ ತಿಳಿದ್ಯೆತೇನೋ?' ಅಂತ. " 'ಪುಟುಕ್! ಜರಜರ! ಡುಬುಕ್! ಮ್ಯಾ!' ಅಂದ್ರೆ ಏನಂತ ಗೊತ್ತೇನಪ್ಪ?" ಅಂದ್ರು.

ಆ ಹುಡ್ಗ ಇಬ್ರುನ್ನು ನೆರಳ್ಗ ಕರ್ಕಂಡು ಬಂದು ಕೂರ್ಸಿ ಹೇಳ್ತಾನೆ, "ಸ್ವಾಮಿ ಒಂದ್ ಮಾಳಿಗೆ ಮನೆ. ಅದಕ ಹೊಂದ್ಕೊಂಡಂಗೆ ಒಂದ್ ವಾರೇ

ಸಪ್ಪರ ಹಾಕಿರ್ತಾರೆ. ಆ ಸಪ್ಪರ್ದ ಬುಡ್ದಲ್ಲಿ ಒಂದ್ ಮೇಕೆ ಕಟ್ತಾ ಇರ್ತಾರೆ. ಆ ಸಪ್ಪರಕೆ ಆ ಮನೆಯೋರು ಒಂದು ಕುಂಬ್ಳ ಬಳ್ಳಿ ಹಬ್ಬಿಸಿರ್ತಾರೆ. ಅದು ಒಂದು ದೊಡ್ಡಕಾಯಿ ಬಿಟ್ಟಿರ್ತದೆ. ಒಂದ್ ಇಲಿಮರಿ ಆ ಕುಂಬ್ಳಕಾಯಿ ತೊಗಟೇನಾ 'ಪುಟುಕ್!' ಅಂತ ಕಡಿಯುತ್ತೆ, ಆ ಕಾಯಿ 'ಜರಜರ!' ಅಂತ ಕೆಳ್ಗ ಕಟ್ಟಿದ್ದ ಮೇಕೆ ಮೇಲೆ 'ಡುಬುಕ್!' ಅಂತ ಬೀಳುತ್ತೆ. ಬಿದ್ದ ರಬಸಕ್ಕ ಮೇಕೆ ಬೆಚ್ಕಂಡು 'ಮ್ಯಾ!' ಅಂತ ಅರಚ್ಕೋತದೆ. ಇದ್ನೆ ನೋಡಿ ಆ ಸಾವುಡಿಲಿದ್ದೋರು ಮಾತಾಡ್ಕಂಡ್ ನಗಾಡಿದ್ದು" ಅಂದ.

ಆಗ ಆ ರಾಜಾ–ಮಂತ್ರಿ 'ಅಲೆಲೆಲೆ ! ಈಟುದ್ದ ಹುಡುಗ್ನಾದ್ರೂ ನಮ್‌ತಲೆ ಕೊರೀತಿದ್ದ ಇಸ್ಯಾನ ಅರ್ಥ ಬಿಡ್ಸಿ ಹೇಳಿಬಿಟ್ನಲ್ಲ?!' ಅಂತ ತಾವೂ "ಪುಟುಕ್! ಜರಜರ! ಡುಬುಕ್! ಮ್ಯಾ!" ಅಂತ ಹಾದ್ಯುದ್ದಕೂ ನೆಗಾಡ್ಕೋತಾ ಅರ್ಮನ್ಗೆ ಬರ್ತಾರೆ.

# ದುಡ್ಡು ದುಡ್ಡು !

ಒಂದೂರಲ್ಲಿ ಅಪ್ಪ ಮಗ ಇದ್ರು. ಇಬ್ರೂ ಕಬ್ಬಿಣಕೆಲ್ಸ ಮಾಡ್ತಿದ್ರು. ಅಪ್ಪ ಕಸ್ಟಜೀವಿ. ದಿನ್ವೆಲ್ಲ ತಿದಿ ಒತ್ತಿ, ಕಬ್ಣ ಕಾಸಿ, ಸುತ್ತಿಗೆ ಬಡ್ದು ಕಮ್ಮಾರ್ಕೆ ಮಾಡಿ ದುಡೀತಿದ್ದ. ಮಗ ನಾಕಕ್ಸರ ಕಲಿಯೋಕೋಗಿ ಅದ್ನೂ ನೆಟ್ಟಗೆ ಕಲೀದೆ, ದಂಡದ ಕೂಳು ತಿಂದ್ಕೊಂಡು ಮನೇಲಿದ್ದ.

ಅಪ್ಪನ್ಗ ಯಾವಾಗ್ಲೂ ಮಗನ್ದೆ ಚಿಂತೆ. ಒಂದಿನ ಮಗನ್ಗ, "ಇವತ್ತು ನೀನು ಕಸ್ಟಪಟ್ಟು ದುಡ್ದು, ಒಂದ್ ಪಾವ್ಲಿನಾದ್ರೂ ದುಡ್ಡ ತರ್ದೆ ಹೋದ್ರೆ ನಿನ್ಗೆ ಊಟ ಇಲ್ಲ, ನನ್ನ ಮನೇಲೂ ಇರಕೂಡ್ದು!" ಅಂತ ಕಡ್ಡಿ ಮುರ್ದಂಗೇಳ್ದ. ಮಗನ್ಗ ಏನು ಮಾಡಾಕು ತೋಚ್ದೆ ಹೋಯ್ತು. ಸಂಜೆಗಂಟ ಅಲ್ಲೂ ಇಲ್ಲೂ ತಿರುಗ್ದ, ಸಂಜೇಗೆ ಮನೇಗ್ಬಂದ.

'ದುಡ್ಡು ಕಾಸು ಒಯ್ಯಲಿಲ್ಲ ಅಂದ್ರೆ ಅಪ್ಪ ಊಟ ಕೊಡಲ್ಲ, ಮನೆಯಿಂದ ಆಚ್ಗೆ ಬ್ಯಾರೆ ಹಾಕ್ತಾನೆ ಏನು ಮಾಡೋದು?' ಅಂತ ಚಿಂತೆ ಮಾಡ್ದ, ನೇರಾ ಅವ್ವನತ್ರ ಹೋಗಿ, "ಅವ್ವಾ ಅವ್ವಾ ! ಇವತ್ತು ಮೂರು ಪಾವ್ಲಿ ಕೊಡವ್ವ. ನಾಳೆ ಬೇಕಾರೆ ದುಡ್ದು ಸಂಪಾದಿಸಿ ತರ್ತೀನಿ. ಇಲ್ದೆ ಹೋದ್ರೆ ಅಪ್ಪ ಇವತ್ತು

ಮನೆಯಿಂದ ಆಚ್ಗ ಹಾಕ್ತಾನೆ!" ಅಂದ. ಹೆತ್ತಕರುಳು ಚುರ್ ಅಂತು. ಮೂರು ಪಾವ್ಲಿ ಕೊಟ್ಲು. ಅದ್ನೆ ತಂದು ಅಪ್ಪನ್ಗ ಕೊಟ್ಟ.

ಅಪ್ಪ ಹಣಾನ್ನ ನೋಡ್ದ, ಮಗನ್ನ ನೋಡ್ದ, ಮಗನ ತಾಯೀನೂ ನೋಡ್ದ. ಕಣ್ಣು ಕೆಂಪು ಮಾಡ್ಕಂಡು, "ಇದು ನೀ ದುಡ್ದದ್ದಲ್ಲ!" ಅಂದೋನೆ ಆ ದುಡ್ನಿ ಎತ್ತಿ ಉರಿಯೋ ಒಲೇಗ ಬಿಸಾಡ್ದ. ಮಗ ಸುಮ್ನಿದ್ದ. ಅಪ್ಪ "ಇವತ್ತೋಗ್ಲೀಂತ ಬುಟ್ಟಿದೀನಿ. ನಾಳೆ ನೀ ದುಡ್ದು ತರ್ದೆ ಹೋದ್ರೆ, ನನ್ ಮನೇಲಿ ಇರಕೂಡ್ದು!" ಅಂತ ಖಡಾಖಂಡಿತ್ವಾಗಿ ಹೇಳ್ದ.

ಮಾರನೆ ದಿನಾನು ದುಡಿಯೋದೆಂಗೆ ಅನ್ನೋದು ತಿಳೀಲಿಲ್ಲ. ದಿನ್ವೆಲ್ಲ ಸುತ್ತಿ ಸಂಜೇಗೆ ಮನೆಗ್ಬಂದ, ಅಪ್ಪನ್ಗ ಗೊತ್ತಾಗ್ದಂಗೆ ಪೆಟ್ಟಿಗೆ ತಗ್ದು ಒಂದು ರೂಪಾಯಿ ಕದ್ದು ಮಡಕ್ಕಂಡ. ತಂದೆ ಮನೆಗೆ ಬರುತ್ಲೇ ತಗಂಡೋಗಿ ಕೈಗೆ ಕೊಟ್ಟ. ಅಪ್ಪ ಹಣ ನೋಡ್ದ. ಮಗನ ಮೊಕ ನೋಡ್ದ. ಕಣ್ಣು ಕೆಂಪ್ಗೆ ಮಾಡ್ಕಂಡು "ಇದು ನೀ ದುಡ್ದ ದುಡ್ಡಲ್ಲ" ಅಂತ ಅವತ್ತೂ ಆ ದುಡ್ನ ಉರಿಯೋ ಒಲೇಗೆಸ್ದು ಬುಟ್ಟ. ಮಗ ಸುಮ್ಮಗಾದ. ಅಪ್ಪ, "ಹೋಗ್ಲೀ, ಇವತ್ತೂ ಒಂದಿನ ಬುಟ್ಟಿದೀನಿ ! ನಾಳೆ ನೀನು ದುಡ್ದು ತರ್ದೆ ಹೋದ್ರೆ, ಬರಿ ಗೈಲಿ ಮನೆಗೆ ಬರ್ಲೇಬ್ಯಾಡ" ಅಂದ. ರಾತ್ರಿ ಪೆಟ್ಟಿಗೆ ತೆಗ್ದು ಅದ್ರಲ್ಲಿದ್ದ ದುಡ್ನೆಲ್ಲ ಮೂರುಕಾಸು ಬಿಡ್ದೆ ಒಯ್ದು ಬ್ಯಾರೆ ಕಡೆ ಜೋಪಾನ ಮಾಡಿಟ್ಟ ಅಪ್ಪ.





ಮಾರನೆದಿನ ಮಗ ಪೆಟ್ಟಿಗೆ ನೋಡ್ದ. ಖಾಲಿ ಇತ್ತು. ರೋಸ ಬಂತು. ಬ್ಯಾರೆ ದಾರಿ ಇಲ್ದೆ ಹೊರಗ್ಹೋದ. ಸಂತೆ ಮಾಳಕ್ಕೋದ. ಸಂಜೇವರ್ಗೂ ಮೂಟೆ ಹೊತ್ರೂ ಒಂದ್ ಪಾವ್ಲೀನೂ ಸಿಕ್ಲಿಲ್ಲ. ನಡುರಾತ್ರಿವರ್ಗೂ ದುಡ್ದ. ಆದ್ರೂ ಒಂದು ಪಾವ್ಲಿ ಆಗ್ಲಿಲ್ಲ. ಅಲ್ಲೇ ಮಲಗ್ದ. ಬೆಳಿಗ್ಗೆ ಬೇಗ ಎದ್ದು ದುಡಿಯೋಕೆ ಸುರುಮಾಡ್ದ. ಸಂಜೇವರ್ಗೂ ದುಡ್ದಮ್ಯಾಲೆ, ಒಟ್ಟು ಒಂದ್ ಪಾವ್ಲಿ ಕೂಲಿ ದುಡ್ಡಾಯ್ತು. ನೇರಾ ತಂದು ತಂದೆ ಕೈಲಿ ಕೊಟ್ಟ.

ತಂದೆ ದುಡ್ ನೋಡ್ದ, ಮಗನ ಮೊಕ ನೋಡ್ದ. "ಇದು ನೀ ದುಡ್ದ ದುಡ್ಡಲ್ಲ!" ಅಂದಿದ್ದೆ ಉರಿಯೋ ಒಲೇಗೆಸ್ದುಬಿಟ್ಟ. ಮಗ ದಬದಬ ಓಡ್ಹೋಗಿದ್ದೆ, ಧಗ ಧಗ ಉರೀತಾ ಇರೋ ಒಲೆ ಬೆಂಕೀಗ ಕೈಹಾಕಿ ಒಲೆ ಒಳಗ್ನ ದುಡ್ನ ಹೊರಕ್ಕ ಎಳ್ದು ಹಾಕ್ದ. ಆಗ ಅಪ್ಪ "ಇದು ನೀ ದುಡ್ದ ದುಡ್ಡು!" ಅಂತ ಮಗನನ್ನ ತಬ್ಕಂಡ.

ಅವತ್ನಿಂದ ಮಗ ಅಪ್ಪನಂಗೆ ಕಸ್ಟ ಜೀವಿ ಆದ.

# ಗಂಗನಾಗ ಗಂಗ ಸೇರ್ತು !

ಒಂದೂರಾಗ ಅಣ್ಣತಮ್ಮ ಇಬ್ರಿದ್ರಂತೆ. ಅವರ್ಗ ತಂದೆ-ತಾಯಿ ಯಾರೂ ಇಲ್ಲ. ಅಣ್ಣ ಕೂಲಿನಾಲಿ ಮಾಡಿ ತಮ್ಮನ್ನ ಓದುಸ್ದ. ಇಬ್ರೂ ಬೆಳ್ದು ದೊಡ್ಡೋರಾದ್ರು. ತಮ್ಮ ಓದೂ ಮುಗೀತು. ಮುಗಿದ್ಮ್ಯಾಲೆ. "ಅಣ್ಣ ಅಣ್ಣಾ ! ನಮ್ಮಕ ಯಾರಾದ್ರೂ ನೆಂಟ್ರುಗಿಂಟ್ರು ಅವ್ರೇನಣ್ಣಾ?" ಅಂತ ಕೇಳ್ದ ತಮ್ಮ. ಅದ್ಕ ಅಣ್ಣ "ಅವ್ರೆಪ್ಪಾ ಸ್ವಾದ್ರು ಮಾವ್ನೋರು. ಆದ್ರೆ ಬ್ಯಾರೇ ಊರಾಗ ಅವರಿರೋದು" ಅಂದ "ಹಂಗಾದ್ರೆ ಸರಿ ನಡೀ ಹೋಗಾನ" ಅಂದಿದ್ದೆ ತಮ್ಮ ಪಯ್ಣಕಟ್ಟಿದ.

ಇಬ್ರೂ ಜತೇಲಿ ಹೋಗ್ತಾ ಇರ್ಬೇಕಾದ್ರೆ ತಮ್ಮು, "ಅಣ್ಣಾ ಅಣ್ಣಾ ಅಲ್ನೋಡು. ಈವಾಗ್ ತಾನೇ ಒಂದ್ ಆನೆ ಮೇದ್ಕೊಂಡೋಗ್ಯದೆ" ಅಂದ. ಅಣ್ಣ ನೋಡ್ದ. ತಮ್ಮ ಹೇಳಿದ್ದು ಸರಿ. ಉಡುಕುಡ್ಕು ಲದ್ದಿ, ಆನೆ ಅಜ್ಜೆಗ್ಳು ಗುರ್ತು ಆವಾಗ್‌ತಾನೇ ಬಿದ್ದಿದ್ವು. "ಅದೇನೋ ನಿಜ ತಮ್ಮ, ಆನೇನೋ ಮೇದ್ಕೊಂಡೋಗ್ಯದೆ. ಆದ್ರೆ ಅದ್ಕೊಂದು ಕಣ್ಣಿಲ್ಲ!" ಅಂದ ಅಣ್ಣ. ಮುಂದ್ಕ ಬಂದ್ರು. ಅಲ್ಲಿ ಒಂದ್ ಆನೆ ಮೇಯ್ತಾ

ಇತ್ತು. ನೋಡಿದ್ರು, ಅದಕೊಂದು ಕಣ್ಣು ಇತ್ತು. ಇನ್ನೊಂದ್ ಕಣ್ಣು ಇರಲಿಲ್ಲ.

ಇನ್ನೂ ಮುಂದಕ ಬಂದ್ರು. ದಾರಿನಾಗ ಯಾರೋ ನಡ್ಕೋಗಿರೋ ಅಜ್ಜೆಗಳ್ನ ತಮ್ಮ ನೋಡ್ದ. "ಅಣ್ಣಾ ಅಣ್ಣಾ ; ಇಲ್ಲಿ ಯಾರೋ ಹೆಂಗ್ಸೊಬ್ಳು ನಡ್ಕೋಗವ್ಳೆ...." ಅಂದ. ಅಣ್ಣ ನೋಡ್ದ. "ಹೌದಪ್ಪ ತಮ್ಮ ; ಆದ್ರೆ ಆ ಹೆಂಗ್ಸು ಬಿಡಿಮನ್ಸಿ ಅಲ್ಲ, ಬಸುರೆಂಗ್ಸು" ಅಂದ. ಒಂದಾಸ್ ದೂರ ಬಂದ್ರು. ಒಂದು ರಚ್ಚೆಮ್ಯಾಲೆ ಒಬ್ಳು ಬಸುರೆಂಗ್ಸು ಕೂತಿದ್ಲು. ನೋಡಿದ್ದೆ ತಮ್ಮನ ಮನ್ಸಕ ಬೇಜಾರ್ ಬಂದುಬುಡ್ತು.

ಇನ್ನೂ ಮುಂದಕ ಬಂದ್ರು. ಎದುರ್ನಿಂದ ಒಬ್ಬಮ್ಮ ಬಂದ್ಲು. ಇವರ್ನ ನೋಡಿದ್ದೆ ತಡ 'ಗೋಳೋ' ಅಂತ ಅಳೂಕ ಸುರು ಮಾಡಿದ್ಲು. "ಯಾಕಮ್ಮ ಏನ್ ಕಾರ್ಣ?" ಅಂತ ಕೇಳಿದ್ರು. "ಅಪ್ಪಾ ನನ್ಕ ಒಬ್ನೇ ಒಬ್ಬ ಮಗನಿದ್ದ. ಅವ್ನು ಹೋಗಿ ಒಂದ್ ವರ್ಸಾಗೋಯ್ತು. ನಿಮ್ಮಂಗೇ ಇದ್ನು, ಅದ್ಕ ಅತ್ತಿದ್ದು" ಅಂದ್ಲು. ಈ ತಮ್ಮ ಬುಕ್ಕು ಎತ್ತಿದ್ದೇ ಆ ಪಕ್ಕ ಈ ಪಕ್ಕ ತಿರುವಿತಿರುವಿ ನೋಡಿದ್ದೆ, "ಅಮ್ಮಾ ಇನ್ನಾರು ತಿಂಗ್ಳು ಒಳ್ಗೆ ನಿನ್ನ ಮಗನು ಬಂದು ನಿನ್ನ ಸೇರ್ತಾನೆ" ಅಂದ. ಅಣ್ಣ ಆದೋನು, "ಅಮ್ಮಾ ! ಹೊತ್ತುಟ್ಟೋ ಹೊತ್ತಗ ನಿನ್ನ ಮಗನು ಬಂದು ನಿನ್ನ ಸೇರ್ತಾನೆ" ಅಂದ್ನು.



ಈ ಯಮ್ಮನ್ಕ ಆನಂದ ಆಗೋಯ್ತು. "ಅಪ್ಪಾ, ನೀವೆ ನನ್ನ ಪಾಲ್ಕ ದೇವ್ರುಗ್ಳು. ಇವತ್ತು ರಾತ್ರಿ ನಮ್ಮ ಮನೆಕ ನೀವ ಬಂದಿದ್ದೋಗ್ಬೇಕು ಅಂತ ಕೇಳ್ಕೊಂಡ್ಳು. ಸರಿ, ಇವ್ರು ಹೋದ್ರು. ಒಳ್ಳೆ ಊಟ ಬಡಿಸಿದ್ಳು. ತಿಂದ್ರು. ಇದ್ರು. ಕೋಳಿ ಕೂಗೋ ಒತ್ತಗ ಆ ಮಗನು ಬಂದು "ಅಮ್ಮಾ! ಅಮ್ಮಾ!" ಅಂತ ಬಾಗುಲು ತಟ್ದ.

ಈ ತಮ್ಮನಾದೋನು ಎದ್ದಿದ್ದೆ ಕ್ಯಾಪ ಮಾಡ್ಕ್ಯಂಡು ಅಲ್ಲಿಂದ 'ದಸ್‌ಬುಸ್' ಅಂತ ಹೊರ್ಟ್ಬುಟ್ಟ. ಅಣ್ಣಾನು ಹಿಂದೇನೆ "ಅಮ್ಮಾ, ಯಾಕೋ ನನ್ನ್ ತಮ್ಮು ನಿಲ್ದೆ ಹೋತಾ ಅವ್ನೆ ನಾನು ಬತ್ತೀನಮ್ಮಾ" ಅಂತ ಹೇಳಿದ್ದೆ ತಮ್ಮನ ಹಿಂದೆ ಹೊರಟ.

ತಮ್ಮ ಸೀದಾ ಇದ್ಯೆ ಕಲ್ಸಿದ್ದ ಗುರುಗ್ಳು ತಾವ್ಕ ಬಂದ್ನು. "ಗುರುಗ್ಳೇ, ನನಕ ತಿಳೀದೀರಾ ನನಕ ಹಗ್ಳು ಕಲ್ಸಿ, ನಮ್ಮಣ್ಣಕ ರಾತ್ರಿ ಇದ್ಯೆ ಕಲ್ಸಿದ್ದೀರಲ್ಲ ! ಇದು ನ್ಯಾಯನಾ?" ಅಂತ ಜಗಳ ಆಡ್ತಾ ಅವ್ನೆ.

ಅಸ್ಟೊತ್ತಕ ಅಣ್ಣಾನು ಅಲ್ಲಿಕ ಬಂದ. "ಏನಾಯ್ತಪ್ಪಾ?" ಅಂತ ಗುರುಗ್ಳು ಅಣ್ಣನ್ನ ಕೇಳಿದ್ರು. ಆವಾಗ ಅಣ್ಣ ಎಲ್ಲಾನೂ ಹೇಳಿ, "ನನ್ತಮ್ಮ ಆನೆ ಲದ್ದೀನಾ, ಅದು ಮೇದಿರೋದ್ನ, ಅದರ ಅಜ್ಜೆ ಗುರ್ತುಗಳ್ನ ನೋಡಿ 'ಆನೆ ಮೇದದೆ' ಅಂದ. ಅದು ಒಂದು ಪಕ್ಕ ಮಾತ್ರ ಮೇದಿರೋದ್ನ ನೋಡಿ

ನಾನು ಅದರ್ಕ ಒಂದು ಕಣ್ಣಿಲ್ಲ' ಅಂದೆ. ಹಂಗೇನೆ ಮುಂದೆ ಬಂದ್ವಿ. ಅಲ್ಲಿ ಒಬ್ಬ ಹೆಂಗ್ಸು ನಡ್ಕೊಂಡೋಗಿರೋ ಅಜ್ಜೆಗಳ್ನ ನೋಡಿ ಯಾರೋ ಹೆಂಗ್ಸು ನಡ್ಕೊಂಡೋಗವ್ಳೆ ಅಂದ'. 'ಆಯಮ್ಮನು ಏಳೋವಾಗ ನೆಲದ ಮ್ಯಾಲೆ ಊರಿದ್ದ ಅಂಗೈ ಗುರ್ತುಗಳ್ನ ನೋಡಿ ನಾನು ಬಸುರೆಂಗ್ಸು !' ಅಂದೆ. ಇನ್ನೂ ಮುಂದ್ಕ ಬಂದಾಗ ಒಬ್ಬಮ್ಮ ಅವ್ಳ ಮಗ ಬಂದು ವರ್ಷಾದಿಂದ ಕಾಣ್ತಿಲ್ಲ ಅಂತ ಅತ್ಕೊಂಡ್ಕೂರ್ತಿದ್ಲು. ಆಗ ಬುಕ್ಕು ನೋಡಿ ನನ್ತಮ್ಮ 'ಆರ್ ತಿಂಗ್ಳು ಒಳ್ಗೆ ಮಗನು ಬತ್ತಾನೆ ಅಂದ್ನು, ಅದೇ ಹೊತ್ತುಗ ಸರಿಯಾಗಿ ಒಬ್ಬಮ್ಮ ನೀರ್ ಸೇದ್ತಾ ಇದ್ಲು. ಕೊಡ ಇಳ್ಸಿಕೊಳ್ಳಾಕ ಕೈಹಾಕಿದ್ಲು ; ಆ ಕೊಡ ಜಾರಿ ನೀರ್ಗ ಬಿದ್ದುಬುಡ್ತು. ಸರಿ ಗಂಗನಾಗ ಗಂಗ ಸೇರ್ತು ತಾಯಾಗ ಮಗನು ಸೇರ್ತಾನೆ ಅಂದೆ. ಅಷ್ಟೇ ಆಗಿದ್ದು" ಅಂದ.

ಇದನ್ನ ಕೇಳಿದ ಗುರುಗಳು "ಓದಿದ್ರೆ ಮಾತ್ರ ಇದ್ಯೆ ಅಲ್ಲ. ಓದಿದೋರು ಮಾತ್ರ ಬುದ್ಧಿವಂತರಲ್ಲ" ಅಂದ್ರು. ಆವಾಗ ತಮ್ಮನ್ಗ ತನ್ನ ತಪ್ಪು ತಿಳೀತು. ಅಣ್ಣನ ಕಾಲಿಡ್ಕಂಡ.





# ಚಾಡಿ ಮುಪ್ಪೆ ?

ಒಂದೂರ್ನಲ್ಲಿ ಒಬ್ಬ ಮುದ್ಕ ಇದ್ದ. ಅವ್ನ ಹುಟ್ಟಿದಾರಬ್ಯದಿಂದ್ಲೂ ಬರೀ ಚಾಡಿ ಹೇಳೋದು, ತಂದಿಕ್ಕಿ ತಮಾಶೆ ನೋಡೋದು, ಇದೇ ಆಗೋಯ್ತು ಬಾಳೆಲ್ಲಾ. ಇವ್ನ ಚಾಡಿಕೋರ್ತನ ತಡೀಲಾರ್ದೆ ಅವ್ನ ಮನೆಯೋರೆಲ್ಲ ಸೇರಿ 'ಇವ್ನ ಊರಲ್ಲಿದ್ರೆ ತಾನೆ ಚಾಡಿ ಹೇಳೋದು. ಕಾಡು–ಮೇಡು ಅಲೀಲಿ ಕಾಡಲ್ಲಿ ಯಾರ್ಮೇಲೆ ಯಾರತ್ರ ಹೇಳ್ಯಾನು ಚಾಡಿಯಾ' ಅಂತೇಳಿ ಕುರಿಕಾಯಾಕ ಹಾಕ್ ಬುಟ್ರು.

ಹೊತ್ ಹುಟ್ಟುತ್ಲೆ ರೊಪ್ಪದಲ್ಲಿರೋ ಕುರೀನಾ ಕಾಡ್ಗ ಹೊಡ್ಕೊಂಡೋ ಗೋದು, ಕತ್ಲಾಗೋವರ್ಗೂ ಮೇಯಿಸೋದು, ಕತ್ಲಾಗುತ್ಲೇ ಮನೇಗೆ ಬರೋನು. ಬಂದೇಟ್ಗೆ ಉಣ್ಣಾಕಿಕ್ಕಿ ಮಲಗಿಸಿಬಿಡೋರು. ಹಿಂಗಾಗಿ ಅವ್ನಗ ಚಾಡಿ ಹೇಳೋಕು ಕಾಲ ಕೂಡಿ ಬರ್ಲೇ ಇಲ್ಲ.

ಒಂದಿನ ಮರ್ದ ನೆರಳಲ್ಲಿ ಕುರಿ ಬುಟ್ಕಂಡು ಕುಂತ್ಗಂಡು 'ಅಲೆಲೇ! ನಾನೇನೋ ಮುದ್ಕಾಗ್ ಬುಟ್ಟೆ. ನನ್ ಚಾಡೀನೂ ಮುದುಕಾಗಿ ಬಿಟ್ಟಿದ್ಯೋ ಇಲ್ಲೋ ನೋಡ್ಬೇಕಲ್ಲ?' ಅಂತ ಯೋಚ್ನೆ ಮಾಡ್ತಿರೋ ಹೊತ್ತಗ ಸರಿಯಾಗಿ,

ಹೊಸ್ದಾಗಿ ಮದುವೆ ಆಗಿರೋ ಗಂಡು–ಹೆಣ್ಣು ದಿಬ್ಬಣ ಬತ್ತಾ ಇತ್ತು. ಹೆಣ್ಣಿನ್ದು ಇದೇ ಊರು, ಗಂಡು ಬ್ಯಾರೆ ಊರು. ಗಂಡು ಮುಂದಾಗಿ ಬತ್ತಾ ಅವ್ನೆ. ಅವ್ನ ಹಿಂದೆ ಕೂಗಳ್ತೆ ದೂರ್ದಲ್ಲಿ, ಹೆಣ್ಣು ನಿಧಾನಕ್ಕ ನಡ್ಕಾ ಬತ್ತಾ ಅವ್ಳೆ.

'ಆಹಾ ! ನನ್ ಚಾಡೀಗೂ ಈಗ ಕಾಲ ಕೂಡ್ಬಂತು ನೋಡೇಬುಡ್ತೀನಿ ಯಾರ್ ಮುಪ್ಪೋ?..... ನಾನೋ ?ನನ್ ಚಾಡೀನೋ?' ಅಂದದ್ದೆ ಗಂಡನ್ನ ಹತ್ರ ಕರ್ದಾ : "ಬಾಪ್ಪ ಇಲ್ಲಿ, ನೀನೇನೋ ಮದುವೆ ಗಂಡು?"

"ಹೌದು ನಾನೇ ! ತಗಾ ತಾಂಬೂಲ" ಅಂದದ್ದೆ ಗಂಡು ಎಲೆ ಅಡಕೆ ಕೊಟ್ಟ.

ಈಸ್ಕಂಡ ಮುದ್ಕ, "ನಿನ್ ನೋಡುದ್ರೆ ಸರದಾರ್ನಂಗೆ ಕಾಣ್ತಿ, ನಿನಗ ತಕ್ಕ ಹೆಣ್ಣ ತರ್ನಿಲ್ಲ ಬುಡು, ನಿನ್ನಪ್ಪ ಅಮ್ಮಾ" ಅಂದ.

"ಏನಯ್ಯ ಹಂಗಂದ್ರೆ?" ಅಂತು ಗಂಡು.

"ಏನು ಅಂದ್ರೆ ಹೆಂಗೇಳಾನೇ, ನಿನ್ಗ್ ತಂದ್ಕಟ್ಟಿರೋ ಹುಡ್ಗಿ ಊರೂರು ಉಪ್ಪು ಮಾರ್ತಾ ಇದ್ದೋಳು ನಿನಗೆ ತಕ್ಕನಾದೋಳಲ್ಲ. ಬೇಕಾರೆ ಇವತ್ತು ರಾತ್ರೀಗೆ ನೀನವಳ ಗ್ಯಾವಮಾಳೆ ನೆಕ್ಕಿ ನೋಡು ! ಉಪ್ಪುಪ್ಪಾಗಿತ್ತೋ? ಆಗ ಒಪ್ಕಾ" ಅಂದ್ಬುಟ್ಟ.

"ಅಲಲೇ! ಇಂತ ಮೋಸ ಆಗೋಯ್ತಾ. ಇವತ್ತೇ ನೆಕ್ಕಿ ನೋಡ್ತೀನಿ" ಅಂದಿದ್ದೇ ಗಂಡು ಮುಂದಕ್ಕೋದ.

ಹಿಂದ್ಲಿಂದ ಹೆಣ್ಣು ಬತ್ತು. "ಆಹಾಹಾ! ಏನ್ತಾಯೀ ನಿನ್ ನೋಡುದ್ರೆ ಚಿಗುರರಳಿ ಮರದಸ್ಟು ಚಂಪ್ಡಾಗಿದೀಯಾ. ನಿನ್ಗ ತಕ್ಕಾದ ಗಂಡು ನೋಡ್ಲಿಲ್ಲ ಬುಡು ನಿಮ್ಮಪ್ಪ ಅಮ್ಮಾ" ಅಂದ.

"ಯಾಕಯ್ಯ ಹಂಗಂತೀಯಾ?" ಅಂತು ಹೆಣ್ಣು.

"ಇನ್ನೇನ್ ತಾನೇ ಹೇಳ್ಲೀ ಕಂದ. ನಿನ್ಗಂಡ ನೋಡೋ ಕಣ್ಣುಗ ಮಾತ್ರ ನರಮನ್ಸ ; ನಿಜರೂಪ್ದಲವ್ರು ಹುಲಿ ಕನವ್ವಾ – ಹುಲಿ ! ಬೇಕಾರೆ ಇವತ್ತು ರಾತ್ರೀಗ ನೋಡು ? ನಿನ್ನ ಗ್ವಾಮಾಳೆ ಕಚ್ಚಿ ತಿನ್ನೋಕೆ ಬತ್ತಾನೆ!" ಅಂದ್ಬುಟ್ಟ.

ಹೆದರ್ಕೆ ಬಂದ್‌ಬುಡ್ತು ಹೆಣ್ಣಿಗ. ಹೆದರೆದ್ರುಕಂಡೇ ಮನೇಗೆ ಬಂದ್ಲು. ರಾತ್ರಿ ಏನಾಯ್ತು ? ಇವ್ನು ನಾಲ್ಗೆ ಬುಟ್ಕೊಂಡು ಗ್ವಾಮಾಳೆ ನೆಕ್ಕೋಕ್ಕೋದ. ಅವಳ್ಗ ಇವ್ನು ಹುಲೀನೇ ಅನ್ನೋದು ದಿಟವಾಯ್ತು.

"ಅಪ್ಪಪ್ಪೋ ! ಹುಲಿ ಬಂತಲ್ರಪ್ಪೋ!" ಅಂತ ಬೊಬ್ಬೆ ಹಾಕುದ್ಲು. ಊರ್ಜನೆಲ್ಲಾ ಸೇರ್ತು. ಇಚಾರ್ಣೆ ಮಾಡ್ತಾಗ, ಇದು ಮುದುಕನ್ದೆ ಕಿತಾಪತಿ

ಅನ್ನೋದು ಸಾಬೀತಾಯ್ತು. ಮುದುಕನ್ನ ಕರ್ದು, ಆಳ್‌ಗೊಂದ್ ಮಾತು ಬೈದು ಛೀಮಾರಿ ಹಾಕಿದ್ರು.

ಏನೇ ಅಂದ್ರೂ, ಏನೇ ಬೈದ್ರೂ ಮುದ್ಕ 'ನಾನ್ ಮುದ್ಕ ಆಗಿರ್‍ಬೌದು?! ನನ್ ಚಾಡಿ ಮಾತ್ರ ಮುಪ್ಪಲ್ಲ ಬುಡಿ!' ಅಂತ ಮುಸಿಮುಸಿ ನಗ್ತಾ ಇದ್ನಂತೆ!

# ವೈದ್ಯ – [illegible]

ಒಂದೆ ಇಬ್ರು ನಾಟೀ ಮದ್ದಿನ ಪಂಡಿತರಿದ್ರು. ಒಬ್ನದು ದೂರ್ದ ಕಾಸೀಪಟ್ನ. ಇನ್ನೊಬ್ಬನ್ದು ಇಲ್ಲೇ ಕಂಚೀಪಟ್ನ. ಇಬ್ರೂ ಗಿಡಮೂಲ್ಕೆ ವೈದ್ಯ ಮಾಡೋದ್ರಲ್ಲಿ ಎತ್ತಿದ ಕೈ. ಇವ್ನಗ ಅವ್ನಿರೋದು ಗೊತ್ತು. ಅವ್ನಗ ಇವ್ನಿರೋದು ಗೊತ್ತು, ಹಿಂಗೇ ಇರ್ತಾ ಇರ್ತಾ.....

ಕಂಚೀಪಟ್ನದ ವೈದ್ಯಗಾರ್ನಗ 'ಕಾಶಿಪಟ್ನದ ವೈದ್ಯಗಾರ್ನ ಕೈಗುಣಾ ಹೆಂಗಿದ್ದದೋ ತಾಳು, ವಸಿ ಪರೀಕ್ಷೆ ಮಾಡೋವಾ' ಅನ್ನುಸ್ತು. ಊರ ಬಸವ್ನಂಗೆ ಮೈ–ಕೈ ತುಂಬ್ಕೊಂಡಿದ್ದ ಒಬ್ಬ ಪೈಲ್ವಾನನ್ನ ಕರ್ದು ಅವ್ನ ಕೈಗೊಂದು ಚೀಟಿ ಬರ್ದು ಕೊಟ್ಟು, "ನೋಡಪ್ಪಾ ಇದಾ ತಕ್ಕಂಡೋಗಿ ಆ ಕಾಸಿಪಟ್ನದ ವೈದ್ಯಗಾರನ್ಗ ಕೊಟ್ಟು, ಅವ್ನು ಏನು ಹೇಳ್ತಾನೋ ಅದ್ನ ರೂಬುರೂಬು ಬಂದು ನನಗೇಳ್ಬೇಕು" ಅಂತ ದಾರಿ ಖರ್ಚುಗ ಕಾಸು ಕೊಟ್ಟು ಕಳುಸ್ದ. "ಹೋಗೋವಾಗ ದಿನಾ ರಾತ್ರಿ ಹುಣ್ಸೇಮರ್ದ ಕೆಳ್ಗೇ ಮಲಗಬೇಕು, ತಪ್ಪಿಸ್ಬಾರ್ದು" ಅಂತ ಕಟ್ಟು ನಿಟ್ ಮಾಡಿ ಕಳುಸ್ದ.

ಸರಿ, ಪೈಲ್ವಾನ ಕಾಸೀಪಟ್ನಕ್ಕೆ ಪ್ರಯಾಣ ಕಟ್ದ. ದಿನಾರಾತ್ರಿ ಹುಣ್ಸೆ

ಮರ್ದ್ ಕೆಳ್ಗ ಮಲಗೋದು. ಬೆಳಿಗ್ಗೆ ಎದ್ದು ಮುಂದುಲೂರ್ಗ ನಡಿಯೋದು ಹಿಂಗೇ ನಡ್ಡೂ ನಡ್ಡೂ ಕಾಸೀಪಟ್ಣಕ್ಕ ಬಂದು ತಲುಪ್ದ. ಬಂದು ತಲುಪ್ರೋ ಅಷ್ಟರೊಳ್ಗ ಪೂರಾ ಖಾಯ್ಲೆ ಬಿದ್ದು ಸಾಯೋ ಹಂಗಾಗೋಗಿದ್ದ. ನಡುದ್ರೆ ಮುಗ್ಗುರಿಸ್ತಿದ್ದ ; ನಿಂತ್ರೆ ಕುಸ್ದು ಬೀಳ್ತಿದ್ದ. ಹಿಂಗಾದ್ರೂ ಹೆಂಗೋ ಮಾಡಿ ಕಾಸೀಪಟ್ಣದ ವೈದ್ಯಗಾರ್ನ ಮನೆ ಬಾಗುಲ್ಗ ಬಂದು ಮುಟ್ದ.

ಕಾಸೀಪಟ್ಣದ ವೈದ್ಯಗಾರ ಚೀಟಿ ತಕ್ಕಂಡು ಓದ್ದ. "ಈ ಚೀಟಿ ತರೋನ ಖಾಯ್ಲೇನಾ ಮದ್ದೂ–ಮೂಲ್ಕೆ ಒಂದೂ ಕೊಡ್ದೆ ಕೈಲಾದ್ರೆ ಮೇಲ್ಮಾಡಿ ಕಳ್ಸು" ಅಂತ ಬರ್ದಿತ್ತು. ನಗ್ತಾ ಆ ಚೀಟಿಯ ಹಿಂದಕ್ಕೆ ಕೊಟ್ಟು "ಹೋಗಪ್ಪಾ, ಕಳ್ಸಿದ್ದು ತಲುಪ್ತು ಅಂತ ನಿನ್ನ ಕಳ್ಸದೋನ್ಗೆ ಹೋಗಿ ಹೇಳು. ಹೋಗುವಾಗ ದಿನಾರಾತ್ರಿ ಬೇವ್ನ ಮರದ ಕೆಳ್ಗೆ ಮಲಗಿದ್ದು ಬೆಳಿಗ್ಗೆ ಎದ್ದೋಗು. ಅಕಸ್ಮಾತ್ ಬೇವ್ನಮರ್ದ ಕೆಳ್ಗ ಬಿಟ್ಟು ಬ್ಯಾರೆ ಮರ್ದ ಕೆಳ್ಗ ಮಲಗ್ದೋ ನೀ ಉಳಿಯಾದು ಕಷ್ಟ ಹುಸಾರು" ಅಂತ ಎಚ್ಚರ್ಕೆ ಕೊಟ್ಟು ; ದಾರಿಖರ್ಚುಗೆ ಕಾಸ್ನೂ ಕೊಟ್ಟು, ಕಳ್ಸದ.

ಸರಿ.... ಪೈಲ್ವಾನ ಎದ್ದೂ ಬಿದ್ದೂ ಹಿಂದಕ್ಕೆ ಬಂದ. ಕಾಸೀಪಟ್ಣದ ನಾಟೀ ವೈದ್ಯ ಹೇಳ್ದಂಗೇನೆ ದಿನಾರಾತ್ರಿ ಬೇವ್ನ ಮರ್ದ ಕೆಳ್ಗ ಮಲಗೋದು, ಬೆಳ್ಗಾನೇ ಎದ್ದು ಮುಂದಕ್ಕ ನಡಿಯೋದು ಮಾಡ್ದ. ದಿನ ದಿನ್ಕೂ ಅವ್ನ ಖಾಯ್ಲೆ ದೂರಾಯ್ತಾ ಬಂತು.





ಬಂದು ಊರು ಸೇರೋದ್ರೊಳ್ಗೆ ಅವ್ನ ಮೊದ್ಲು ಹೆಂಗೆ ಮೈಕೈ ತುಂಬ್ಕೊಂಡಿದ್ನೋ ಹಂಗೇ ಆದ. ಬಂದು ಕಂಚಿಪಟ್ಣದ ವೈದ್ಯಗಾರ್ನ ಮನೆ ಬಾಗ್ಲು ಮುಟ್ದ. ಮೈ–ಕೈ ತುಂಬ್ಕೊಂಡಿರೋ ಜಟ್ಟೀನ ನೋಡಿದ್ದೆ ಆ ವೈದ್ಯಗಾರ, ಅವ್ನ ಬಾಯಿಬುಡೋಕೂ ಮೊದ್ಲೇ "ನೀ ಹೇಳೋದೇನೂ ಬ್ಯಾಡ ತಿಳೀತು ಬುಡು. ಅವ್ನ ನನ್ನಂಗೆ ಸಮತೂಕ್ದೋನು" ಅಂತ ನಗಾಡ್ದ. ಅದ್ಕೆ ಹುಣಸೆ ಹಂಗೆ, ಬೇವು ಹಿಂಗೆ.

# ಪಿಟ್ಟೇಕಾಟ

ಒಂದೂರದಲ್ಲಿ ಒಬ್ಬ ಗೌಡ ಕೀರೆ ಮಡಿ ಬೆಳೆದಿದ್ದ. ಸೊಪ್ಪೂ ಚೆನ್ನಾಗಿ ಬೆಳ್ದಿತ್ತು. ಒಂದು ಪಿಟ್ಟೇಕಾಟ ದಿನಾ ಹೋಗಿ ಆ ಸೊಪ್ನೆಲ್ಲ ತಿನ್ನೋದು, ಗೌಡ ಕಾವ್ಲ ಕುಂತ. ಪಿಟ್ಟೇಕಾಟ ಬತ್ತು. ಹಿಡ್ದುದ್ದೇ ಕೆಂಗಟ್ಟೆ ನೀರ್ಗ ಎಜ್ಜಿ. "ಸತ್ಲಾ ಪಿಟ್ಟೇಕಾಟ?" ಅಂದ. ಆಗ ಪಿಟ್ಟೇಕಾಟ :

**"ನಾನ್ಯಾಕ ಸಾಯಾನೆ?**
**ಎಳ್ಗೀರೆ ಸೊಪ್ ತಿಂದೆ !**
**ಕೆಂಗಟ್ಟೆ ನೀರ್ ಕುಡೀತಾ ಇವ್ನಿ!"**

– ಅಂತು. ಗೌಡಂಗ ಸಿಟ್ಟು ಬತ್ತು. ಎತ್ತಿದ್ದೇ ಅಗಸ್ರ ಕಲ್‌ಮ್ಯಾಲೆ ಪಟಪಟ್ನೆ ಒಗ್ದು ಬುಟ್ಟ. ಒಗ್ದ ಮ್ಯಾಲೆ, "ಸತ್ಲಾ ಪಿಟ್ಟೇಕಾಟ?" ಅಂದ. ಆಗ ಪಿಟ್ಟೇಕಾಟ :

**"ನಾನ್ಯಾಕ ಸಾಯಾನೆ?**
**ಎಳ್ಗೀರೆ ಸೊಪ್ ತಿಂದೆ !**

**ಕೆಂಗಟ್ಟೆ ನೀರ್ ಕುಡ್ದೆ!**

**ಅಗಸ್ರ ಕಲ್ ಮ್ಯಾಲೆ ಸೊಗ್ಸು ಮಾಡ್ತಾ ಇವ್ನಿ!"**

– ಅಂತು. ಗೌಡಂಗ ಇನ್ನೂ ಕ್ವಾಪತ್ತು ಬುಡ್ತು, ಎತ್ತಿದ್ವೇ ಹುಣ್ಸೆ ಕೊಂಬ್ಗ ನ್ಯಾತಾಕಿ ಬುಟ್ಟು, "ಸತ್ಲಾ ಪಿಟ್ಟೇಕಾಟ?" ಅಂದ. ಆವಾಗ ಅದು :

**"ನಾನ್ಯಾಕ ಸಾಯಾನೆ?**

**ಎಳ್ಗೀರೆ ಸೊಪ್ ತಿಂದೆ !**

**ಕೆಂಗಟ್ಟೆ ನೀರ್ ಕುಡ್ದೆ !**

**ಅಗಸ್ರ ಕಲ್ ಮ್ಯಾಲ್ ಸೊಗ್ಸು ಮಾಡ್ದೆ !**

**ಹುಣ್ಸೆ ಮರ್ದ ಮ್ಯಾಲೆ ಉಯ್ಯಾಲೆ ಆಡ್ತಾ ಇವ್ನಿ !"**

– ಅಂತು. ಗೌಡ 'ಇನ್ನೂ ಸಾಯ್ಲಿಲ್ವ?' ಅಂದಿದ್ವೆ, ಅಲ್ಲೊಂದು ಸೀಗೆ ಮೆಳೆ ಇತ್ತು ; ಎತ್ತಿ ಅದ್ರಲ್ಲಿ ಸಿಗ್ದು, "ಸತ್ಲಾ ಪಿಟ್ಟೇಕಾಟ?"ಅಂದ. ಆವಾಗ ಏನಂತದು ? :

**"ನಾನ್ಯಾಕ ಸಾಯಾನೆ ?**

**ಎಳ್ಗೀರೆ ಸೊಪ್ ತಿಂದೆ !**

**ಕೆಂಗಟ್ಟೆ ನೀರ್ ಕುಡ್ದೆ!**





ಅಗಸ್ರ ಕಲ್ ಮ್ಯಾಲ್ ಸೊಗ್ಸು ಮಾಡ್ದೆ !
ಹುಣ್ಸೆ ಮರ್ದ ಮ್ಯಾಲ್ ಉಯ್ಯಾಲೆ ಆಡ್ದೆ!
ಸೀಗೆ ಮೆಳೇಲೀಗ ಸಿಕ್ಕು ಬಿಡಿಸ್ಕೋತಾ ಇವ್ನಿ !

– ಅಂತು. 'ಎಲಾ ಪಿಟ್ಟೇಕಾಟ ! ಇನ್ನೂ ಸಾಯ್ಲಿಲ್ವ?' ಅಂದಿದ್ದೆ. ಕುಡ್ಲು ತಗಂದ್ ಕುಯ್ತಾ "ಸತ್ಲಾ ಪಿಟ್ಟೇಕಾಟ?' ಅಂದ. ಅದೇನಂತು ಗೊತ್ತಾ :

"ನಾನ್ಯಾಕ ಸಾಯಾನೆ ?
ಎಳ್ಗೀರೆ ಸೊಪ್ ತಿಂದೆ !
ಕೆಂಗಟ್ಟೆ ನೀರ್ ಕುಡ್ದೆ!
ಅಗಸ್ರ ಕಲ್ ಮ್ಯಾಲ್ ಸೊಗ್ಸು ಮಾಡ್ದೆ !
ಹುಣ್ಸೆ ಮರ್ದ ಮ್ಯಾಲ್ ಉಯ್ಯಾಲೆ ಆಡ್ದೆ!
ಸೀಗೆ ಮೆಳೇಲಿ ಸಿಕ್ಕು ಬಿಡಿಸ್ಕೊಂಡೆ !
ಬಾಡುಗ ಕುಡ್ಲಲ್ಲಿ ರವರವ ಅಂತಾ ಇವ್ನಿ!"

– ಅಂತು. 'ಹಂಗಾ!' ಅಂದಿದ್ದೇ ಒಯ್ದು ಕಿಚ್ಚಿಗಿಡ್ದು, "ಸತ್ಲಾ ಪಿಟ್ಟೇಕಾಟ?" ಅಂದ. ಆವಾಗ ಅದು :

"ನಾನ್ಯಾಕ ಸಾಯಾನೆ ?
ಎಳ್ಗೀರೆ ಸೊಪ್ ತಿಂದೆ !
ಕೆಂಗಟ್ಟೆ ನೀರ್ ಕುಡ್ದೆ!
ಅಗಸ್ರ ಕಲ್ ಮ್ಯಾಲ್ ಸೊಗ್ಸು ಮಾಡ್ದೆ !
ಹುಣ್ಸೆ ಮರ್ದ ಮ್ಯಾಲ್ ಉಯ್ಯಾಲೆ ಆಡ್ದೆ!
ಸೀಗೆ ಮೆಳೇಲಿ ಸಿಕ್ಕು ಬಿಡಿಸ್ಕೊಂಡೆ !
ಬಾಡುಗ ಕುಡ್ಲಲ್ಲಿ ರವರವ ಅಂದೆ !
ರವರವ ಅನ್ನೋ ಬೆಂಕಿ ಕಿಚ್ಚಾದೆ !"

– ಅಂತು. 'ಹಂಗೋ!?' ಅಂದಿದ್ದೆ. ಮಡಕೆಗ್ಹಾಕಿ ಒಲೆ ಮ್ಯಾಲೆ ಬೇಯಿಸ್ತಾ "ಸತ್ಲಾ ಪಿಟ್ಟೇಕಾಟ?" ಅಂದ. ಆಗ ಅದಂತದೆ :

"ನಾನ್ಯಾಕ ಸಾಯಾನೆ ?
ಎಳ್ಗೀರೆ ಸೊಪ್ ತಿಂದೆ !
ಕೆಂಗಟ್ಟೆ ನೀರ್ ಕುಡ್ದೆ!
ಅಗಸ್ರ ಕಲ್ ಮ್ಯಾಲ್ ಸೊಗ್ಸು ಮಾಡ್ದೆ !
ಹುಣ್ಸೆ ಮರ್ದ ಮ್ಯಾಲ್ ಉಯ್ಯಾಲೆ ಆಡ್ದೆ!
ಸೀಗೆ ಮೆಳೇಲಿ ಸಿಕ್ಕು ಬಿಡಿಸ್ಕೊಂಡೆ !

ಬಾಡುಗ ಕುಡ್ಲಲ್ಲಿ ರವರವ ಅಂದೆ !
ರವರವ ಅನ್ನೋ ಬೆಂಕಿ ಕಿಚ್ಚಾದೆ !
ಈಗ ಕುಂಬಾರ್ ಮಾಡ್ದ ಕುಡ್ಕೇಲಿ ಕುಣಕುಣ್ಕೊಂಡ್ ಏಳ್ತಾ ಇವ್ನಿ!"

– ಅಂತು. 'ಹೌದಾ, ಮಾಡ್ತಿನಿರು ನಿಂಗ!' ಅಂದಿದ್ವೆ, ಚೆನ್ನಾಗಿ ಬೇಯ್ಸಿ ಎತ್ತಿ ತಣುಗ್ಗಾಕ್ಕಂಡು "ಸತ್ತಾ ಪಿಟ್ಟೇಕಾಟ?" ಅಂದ. ಆಗ ಅದು :

"ನಾನ್ಯಾಕ ಸಾಯಾನೆ ?
ಎಳ್ಗೀರೆ ಸೊಪ್ ತಿಂದೆ !
ಕೆಂಗಟ್ಟೆ ನೀರ್ ಕುಡ್ದೆ!
ಅಗಸ್ರ ಕಲ್ ಮ್ಯಾಲ್ ಸೊಗ್ಸು ಮಾಡ್ದೆ !
ಹುಣ್ಸೆ ಮರ್ದ ಮ್ಯಾಲ್ ಉಯ್ಯಾಲೆ ಆಡ್ದೆ !
ಸೀಗೆ ಮೆಳೇಲಿ ಸಿಕ್ಕು ಬಿಡಿಸ್ಕೊಂಡೆ !
ಬಾಡುಗ ಕುಡ್ಲಲ್ಲಿ ರವರವ ಅಂದೆ !
ರವರವ ಅನ್ನೋ ಬೆಂಕಿ ಕಿಚ್ಚಾದೆ !
ಕುಂಬಾರ್ ಮಾಡ್ದ ಕುಡ್ಕೇಲಿ ಕುಣಕುಣ್ಕೊಂಡ್ ಎದ್ದೆ !
ಈಗ ಕಂಚ್ಗಾರ್ನ ತಟ್ಟೇಲಿ ಮಿಂಚಿಮಿಂಚಿಕೊಂಡು ಪುರ್ರನೆ ಹಾರೋದೆ !
– ಅಂತ ಪುರ್ರನೆ ಹಾರೋಯ್ತು!.....

# ಪಾರ್ವತಿ ಪರಮೇಸ್ವರರ ಸೋಲು

ಕುರಿ ಕಾಯ್ತಾ ಕಾಯ್ತಾ ಬೀರಪ್ಪ ಒಂದ್ ಹಳ್ಳದ ದಂಡೆಕ್ಕ ಬಂದ. ಅಲ್ಲಿ ಕುರಿ ಮಂದೆಗಾಗೋವಸ್ಟು ನೀರಿತ್ತು, ನೆರಳಿತ್ತು, ಹುಲ್ಲಿತ್ತು, ಇದೇ ತಕ್ಕ ಜಾಗ ಅಂದ್ಕಂಡು ಅಲ್ಲೇ ಕುರಿಕಾಯೋಕೆ ದೊಡ್ಡಿ ಕಟ್ತಾ ಇದ್ದ.

ಅದೇ ಹೊತ್ಗ ಪಾರ್ವತಿ - ಪರಮೇಸ್ವರ ಭೂಲೋಕ ತಿರಗಾಡ್ಕ್ಯಂಡ್ ಅಲ್ಲುಗ ಬಂದ್ರು. "ಇಲ್ಲ್ಯಾಕಯ್ಯಾ ಕಟ್ತೀಯಾ?" ಕೇಳುದ್ರು ಕುರಿಕಾಯೋನ, "ಮಳೆ ಆಗಿ ಹಳ್ಳ ಹರುದ್ರೆ, ಈ ದೊಡ್ಡಿ ಇದ್ದಾತೇನಯ್ಯಾ? ಕೊಚ್ಕೊಂಡ್ ಹೋಗಾಕಿಲ್ವೇ" ಅಂದ್ರು.

"ಮಳೆ ಎಲ್ಲಿಂದ ಬಂದಾತು" ಬೀರಪ್ಪ ಅಂದ. "ನಮ್ಮ ನಾಡ್ಗ ಇನ್ನೂ ಮೂರು ತಿಂಗ್ಳ ಮಳೆ ಇಲ್ಲ."

ಪಾರ್ವತಿ–ಪರಮೇಸ್ವರರ್ಗ ಕ್ವಾಪ ಬತ್ತು, 'ನೋಡಿದ್ಯಾ ! ಈ ಲೋಕ್ದ ಕಸ್ಟಸುಖ ನೋಡೋರು ನಾವು. ನಾವ್ ಏನೋ ಒಳ್ಳೇದು ಹೇಳೋಕೋದ್ರೆ ನಮ್ಗೆ ತಿರುಗ್ಸಿ ಹೇಳ್ತಾನೆ?..... ಇರ್ಲಿ!' ಅಂದಿದ್ದೆ ಇಬ್ರೂ ಅಲ್ಲಿ ನಿಲ್ದೆ ನ್ಯಾರ್ವಾಗಿ ಮಳೆ ದ್ಯಾವ್ರತ್ರ ಹೋದ್ರು. "ಈಗಿಂದೀಗ್ಲೇ ಮಳ್ರಾಯ್ನ ಆ

ಕುರಿಕಾಯೋ ಬೀರ್ನ ನಾಡ್ಗ ಕಳ್ಸು" ಅಂತ ಜೋರು ಮಾಡಿದ್ರು. "ಮಳ್ರಾಯನ್ನ ಬ್ಯಾರೆ ನಾಡ್ಗ ಕಳ್ಸಿವ್ನಿ. ಅವ್ನು ಬರೋಕ್ಕ ಇನ್ ಮೂರ್ ತಿಂಗ್ಳು ಆಯ್ತದೆ. ಆಮ್ಯಾಕ್ ಕಳುಸ್ತೀನಿ" ಅಂದ ಮಳೆದ್ಯಾವ್ರು. ಮೊಕ ಬಾಡ್ಸಕಂಡು ಪಾರ್ವತಿ ಪರಮೇಸ್ವರ ಕೈಲಾಸಕ್ಕೊಂಟೋದ್ರು.

ಮೂರು ತಿಂಗ್ಳ ಮುಗ್ದೋದೋ. ಬೀರಪ್ಪ ದೊಡ್ಡಿ ಕೀಳ್ತಾ ಇದ್ದ. ಭೂಲೋಕ ಸಂಚಾರ ಮಾಡ್ತಾ ಪಾರ್ವತಿ–ಪರಮೇಸ್ವರ ತಿರುಗಾ ಅಲ್ಲುಗ ಬಂದ್ರು. "ಯಾಕೋ ಬೀರ ದೊಡ್ಡಿ ಕೀಳ್ತಿ?" ಅಂದ್ರು. "ಮಳ್ರಾಜ ಬಂದಾಯ್ತಲ್ಲ ನಮ್ಮ ನಾಡ್ಗ!" ಅಂದಿದ್ದೆ ಕುರಿಮುಂದೆ ನಡಸ್ಕೋತಾ ನಡ್ದ. ಪಾರ್ವತಿ–ಪರಮೇಸ್ವರ್ಗ ಇನ್ನೂ ಕ್ಯಾಪತ್ಬುಡ್ತು. 'ಎಸ್ಟು ಸೊಕ್ಕು ಈ ಕುರಿ ಕಾಯೋನ್ಗ ? ಮಳ್ರಾಯ ಬಂದೇಬುಟ್ಟ ನಾಡ್ಗ ಅಂತ ತಾನೇ ಕರ್ಸಿರೋವಂಗೆ ಹೇಳ್ತಾನಲ್ಲ!' ಅಂದಿದ್ದೆ ನ್ಯಾರ್ವಾಗಿ ಮಳೆದ್ಯಾವ್ರತ್ರ ಹೋದ್ರು. "ವಾಪ್ಸ ಕರ್ಸು ಮಳ್ರಾಯ್ನ" ಅಂದ್ರು.

"ಮೋಡಾನ ಮುಂದೆ ಕಳ್ಸಿವ್ನಿ. ಗುಡ್ಗು - ಮಿಂಚು ಹಿಂದ್ ಹಿಂದೆ ಕಳ್ಸಿವ್ನಿ. ಕೊಟ್ಟಿರೋ ಹುಕುಮ್ ಈವಾಗ ಅವ್ರ ಕೈಯಾಗದೆ, ನನ್ಕೈಲಿ ಏನೂ ಇಲ್ಲ" ಅಂದೋನೆ ಕೈ ಎತ್ ಬುಟ್ಟ ಮಳೆದ್ಯಾವ್ರು.

ಪಾರ್ವತಿ–ಪರಮೇಸ್ವರ 'ನಾವೇ ಇವತ್ತು ಈ ಕುರಿ ಕಾಯೋನ್ಗ ಸೋತ್ವು' ಅಂತ ಮೊಕ ಕೆಳ್ಗ ಹಾಕುದ್ರು.





